

ಕರ್ನಾಟಕ ಸರ್ಕಾರ

## ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ

# ವಾರ್ಷಿಕ ವರದಿ

೧೯೯೪-೯೫

# ಕರ್ನಾಟಕ ಸರ್ಕಾರ

# ವಾರ್ಷಿಕ ವರದಿ

# 1994-95

# ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ

# ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ

## ವಾರ್ಷಿಕ ವರದಿ 1994 — 95



—

## ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ

### ಪರಿಚಯ

ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ ರಾಜ್ಯ ಸರ್ಕಾರದ ಹಲವು ಮುಖ್ಯ ಇಲಾಖೆಗಳ ಪೈಕಿ ಒಂದಾಗಿದೆ, ಇದರ ಪ್ರಾಥಮಿಕ ಧ್ಯೇಯವು ರಾಜ್ಯದ ಜನತೆಯು ಮೂಲಭೂತ ಸೌಕರ್ಯಗಳನ್ನು ಒದಗಿಸುವ ಬಗ್ಗೆ ಇರುತ್ತದೆ. ಅಂದರೆ, ವಸತಿ, ಕುಡಿಯುವ ನೀರು, ನಗರ ನೈರ್ಮಲ್ಯ, ಒಳಚರಂಡಿ, ಕೊಳಚೆ ನಿವಾಸಿಗಳಿಗೆ ನಾಗರೀಕ ಸೌಲಭ್ಯಗಳು ಮತ್ತು ನಗರದ ಕೊಳಚೆ ಪ್ರದೇಶಗಳ ಪರಿಸರದ ಸುಧಾರಣೆ,

### ವ್ಯವಸ್ಥೆ :

ಸಚಿವಾಲಯದ ಮಟ್ಟದಲ್ಲಿ, ಇಲಾಖೆಯು ಇಬ್ಬರು ಕಾರ್ಯದರ್ಶಿಗಳನ್ನು ಹೊಂದಿದೆ, ಇಬ್ಬರು ಉಪಕಾರ್ಯದರ್ಶಿಗಳು, ಒಬ್ಬರು ಆಂತರಿಕ ಆರ್ಥಿಕ ಸಲಹೆಗಾರರು, ಒಬ್ಬ ಜಂಟಿ ನಿರ್ದೇಶಕರು(ಯೋಜನೆ) ಮತ್ತು 8 ಮಂದಿ ಅಧೀನ ಕಾರ್ಯದರ್ಶಿಗಳು , ಕಾರ್ಯದರ್ಶಿಗಳಿಗೆ ಸಹಾಯಕರಾಗಿರುತ್ತಾರೆ. 1) ವಸತಿ 2) ನಗರಪಾಲಿಕೆ 3) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (4) ಸಿಬ್ಬಂದಿ (5) ಮಂಡಳಿಗಳು (6) ನಗರ ಭೂ ಪರಿಮಿತಿ (7) ಕಾನೂನು ಕೋಶ (8) ಸ್ವೀಕೃತಿ ಮತ್ತು ರವಾನೆ ಶಾಖೆಗಳನ್ನು ಈ ಇಲಾಖೆಯು ಹೊಂದಿರುತ್ತದೆ.

ಈ ಕೆಳಕಂಡ ಸಂಸ್ಥೆಗಳು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಆಡಳಿತಾತ್ಮಕ ಅಧೀನದಲ್ಲಿ ಬರುತ್ತವೆ.

1. ಕರ್ನಾಟಕ ಗೃಹ ಮಂಡಳಿ
2. ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ
3. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ
4. ಪೌರಾಡಳಿತ ನಿರ್ದೇಶನಾಲಯ
5. ಮಹಾನಗರಪಾಲಿಕೆ
6. ನಗರ ಭೂ ಪರಿಮಿತಿ
7. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ
8. ಬೆಂಗಳೂರು ಅರ್ಬನ್ ಆರ್ಟ್ ಕಮಿಷನ್
9. ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ
10. ನಗರ ಯೋಜನಾ ಇಲಾಖೆ
11. ನಗರಾಭಿವೃದ್ಧಿ ಪ್ರಾಧಿಕಾರಗಳು ಮತ್ತು ನಗರಾಭಿವೃದ್ಧಿ ಮಂಡಳಿಗಳು
12. ನಗರ ಯೋಜನಾ ಪ್ರಾಧಿಕಾರಗಳು
13. ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ
14. ಕರ್ನಾಟಕ ನಗರ ಮೂಲಭೂತ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ
15. ಬೆಂಗಳೂರು ಸಮೂಹ ಶೀಘ್ರ ಸಾರಿಗೆ ನಿಯಮಿತ(ಬಿಎಂಆರ್‌ಟಿಎಲ್)

ಅನುಬಂಧ-1

## ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಯೋಜನಾ ಕಾರ್ಯಕ್ರಮಗಳಲ್ಲಿನ ಆರ್ಥಿಕ ಅನುದಾನದ ವಿವರ

(ರೂ.ಲಕ್ಷಗಳಲ್ಲಿ)

| ವಿಭಾಗ : ಇಲಾಖೆ | 1992-93 | 1993-94 | | 1994-95 | | 1995-96 |
|---|---|---|---|---|---|---|
| | ಅನುದಾನ | ಅನುದಾನ | ಹಿಂದಿನ ವರ್ಷದ ಶೇಕಡ ವ್ಯತ್ಯಾಸ | ಅನುದಾನ | ಹಿಂದಿನ ವರ್ಷದ ಶೇಕಡ ವ್ಯತ್ಯಾಸ | ಅನುದಾನ |
| 1. ವಸತಿ ವಿಭಾಗ | 9490.00 | 19000.00 | 100.21 | 12797.00 | 32.65 | 10880.00 |
| 2. ನಗರಾಭಿವೃದ್ಧಿ ವಿಭಾಗ | 7157.00 | 9142.00 | 27.73 | 16296.00 | 78.25 | 13011.00 |
| ಒಟ್ಟು (1 ಮತ್ತು 2) | 16647.00 | 28142.00 | 69.05 | 29093.10 | 3.38 | 23931.00 |
| 3. ಇಲಾಖಾವಾರು ವಿವರ | | | | | | |
| 1) ಕ.ನ.ನೀ.ಸ ಮತ್ತು ಒಚ ಮಂಡಳಿ | 4083.00 | 5026.00 | 23.09 | 7033.00•• | 39.93 | 6000.00 |
| 2) ಬೆಂ.ನೀ.ಸ ಮತ್ತು ಒಚ ಮಂಡಳಿ | 1662.00 | 2002.00 | 20.46 | 2220.00•• | 10.00 | 2000.00 |
| 3) ಕ.ಕೊ.ನಿರ್ಮೂಲನಾ ಮಂಡಳಿ | 760.00 | 912.00 | 20.00 | 859.00 | 5.81 | 859.00 |
| 4) ಪೌರಾಡಳಿತ ನಿರ್ದೇಶನಾಲಯ | 564.00 | 1177.00 | 108.69 | 626.00 | 46.80 | 1135.00 |
| 5) ಬೆಂ.ಎಂ.ಆರ್.ಡಿ.ಎ. | 49.00 | 59.00• | 20.00 | 3000.00 | 4985.00 | 2980.00 |
| 6) ನಗರ ಯೋಜನಾ ಇಲಾಖೆ | 20.00 | 60.00 | 200.00 | 56.00 | 6.66 | 56.00 |
| 7) ನಗರ ಕಲಾ ಆಯೋಗ | 4.00 | 5.00 | 25.00 | 6.00 | 20.00 | 6.00 |
| 8) ನಗರ ಭೂ ಪರಿಮಿತಿ | 15.00 | 18.00 | 20.00 | 5.00 | 72.00 | 5.00 |

• ಬಿ.ಡಿ.ಎ.ಯು ಬಿ.ಎಂ.ಟಿ.ಸಿ. (ಎಂ.ಆರ್.ಟಿ.ಎಸ್) ವಿತರಣೆಗಾಗಿ ಬಿ.ಎಂ.ಆರ್.ಡಿ.ಎ. ಇಲಾಖೆಯಲ್ಲಿ 100.00 ಲಕ್ಷ ರೂಪಾಯಿಗಳನ್ನು ನಿಗದಿಪಡಿಸಿದೆ.

•• ಮಾರ್ಕೆಟ್ ಬಾರೋಯಿಂಗ್ಸ್ ಒಳಗೊಂಡಂತೆ.




1. Bangalore water Supply & Sewerage Board (BWSSB)
2. Karnataka Urban Water Supply & Drainage Board(KUWS
3. Karnataka Slum Clearance Board(KSCB)
4. Directorate of Municipal Administration(DMA)
5. Department of Town Planning(DTP)
6. Bangalore Urban Arts Commission(BUAC)
7. Urban Land Ceiling(ULC)
8. Bangalore Metropolitan Region Development Authority(BMRDA)
9. Housing

## 1992–93 ರಿಂದ 1994–95ರ ವರೆಗಿನ ವಸತಿ ಯೋಜನೆಯ ಭೌತಿಕ ಸಾಧನೆ

( ಡಿಸೆಂಬರ್ 1994ರ ಅಂತ್ಯದವರೆಗೆ)

| ಕಾರ್ಯಕ್ರಮ : ಯೋಜನೆ | 1992–93 | | | 1993–94 | | | 1994–95( ಡಿಸೆಂಬರ್ ಅಂತ್ಯದವರೆಗೆ) | | |
|---|---|---|---|---|---|---|---|---|---|
| | ಗುರಿ | ಸಾಧನೆ | ಶೇ. | ಗುರಿ | ಸಾಧನೆ | ಶೇ. | ಗುರಿ | ಸಾಧನೆ | ಶೇ. |
| 1. ನಿವೇಶನ ಹಂಚಿಕೆ | 1,75,000 | 1,57,213 | 90 | 1,00,000 | 1,02,576 | 103 | 2,00,000 | 1,23, 486 | 62 |
| 2. ವಸತಿ ನಿರ್ಮಾಣ | | | | | | | | | |
| 1) ಆಶ್ರಯ ಯೋಜನೆ | | | | | | | | | |
| ಎ) ಹಿಂದುಳಿದವರು | | | | | | | | | |
| 1) ಜಿ.ಪಂ. | 90,944 | – | – | 90,944 | 32,813 | 36 | 58,468 | 32,438 | 55 |
| 2) ಕೆ.ಹೆಚ್.ಬಿ. | 15,056 | 2,594 | 17 | 12,462 | 4,259 | 34 | 7,866 | 4,139 | 53 |
| ಒಟ್ಟು | 1,06,000 | 2,594 | 2 | 1,03,406 | 37,072 | 36 | 66,334 | 36,577 | 55 |
| ಬಿ: ಹೊಸ ಶ್ರೇಣಿ ಜಿ.ಪಂ. | | | | | | | 1,50,000 | | |
| 2) ಡಾ. ಅಂಬೇಡ್ಕರ್ ಶತಮಾನೋತ್ಸವ | | | | | | | | | |
| ಎ) ಹಿಂದುಳಿದವರು | – | – | – | 32,134 | 12,175 | 38 | 19,958 | 10,205 | 51 |
| ಬಿ) ಹೊಸ | – | – | – | – | – | – | 12,500 | 1,078 | 9 |
| 3) ಇಂದಿರಾ ಆವಾಸ್ ಯೋಜನೆ | 5,173 | 5,126 | 99 | 12,076 | 11,065 | 92 | 11,517 | 8,755 | 76 |
| 3. ನೆರಳಿನ ಭಾಗ್ಯ | – | – | – | 17,666 | 13,047 | 74 | 4,619 | 2,950 | 64 |
| ಹೊಸ | | | | | | | 25,000 | 9,429 | 38 |
| 4. ಎಲ್.ಐ.ಜಿ.:ಎಂ.ಐ.ಜಿ. | 4,393 | 1,850 | 42 | 5,896 | 3,012 | 51 | 4,566 | 782 | 17 |

-4-

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 5. ಎಂ.ಬಿ.ಬಿ.ಎಸ್. ವರ್ಗಗಳು | | | | | | | | | |
| ಎ) ಕೆ.ಎಸ್.ಪಿ.ಬಿ. | 1,200 | 1,387 | 156 | 1,600 | 1,600 | 100 | 1,800 | 993 | 55 |
| ಬಿ) ಕೆ.ಜೆ.ಬಿ. | 500 | 364 | 73 | 200 | 48 | 24 | 80 | – | – |
| ಸಿ) ಡಿ.ಎಂ.ಎ. (ಭಾಗಶ ವರದಿ ) | 1,000 | 1,698 | 169 | 843 | 388 | 46 | 455 | 110 | 24 |
| ಎಂ.ಬಿ.ಬಿ.ಎಸ್. ಒಟ್ಟು | 2,700 | 3,449 | 128 | 2,643 | 2,036 | 77 | 2,335 | 1,103 | 47 |

5759-2

ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಭೌತಿಕ ಸಾಧನೆಯ ಪಟ್ಟಿ

( ನಗರ ನೀರು ಸರಬರಾಜು ಮತ್ತು ಪರಿಸರ ಸುಧಾರಣೆ)

ಭೌತಿಕ

| ವಿಭಾಗ: ಇಲಾಖೆ | 1992–93 | | 1993–94 | | 1994–95 ( ಡಿಸೆಂಬರ್ 94ರ ಅಂತ್ಯದವರೆಗೆ | | ಷರಾ |
|---|---|---|---|---|---|---|---|
| | ಗುರಿ | ಸಾಧನೆ | ಗುರಿ | ಸಾಧನೆ | ಗುರಿ | ಸಾಧನೆ | |
| 1 | 2 | 3 | 4 | 5 | 6 | 7 | 8 |
| 1. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ: | | | | | | | |
| ಅ) ಕೊಳವೆ ನೀರು ಸರಬರಾಜು ಯೋಜನೆ | 16 | 10 | 10 | 5 | 4 | — | |
| ಬ) ನಗರ ನೀರು ಸರಬರಾಜು ಯೋಜನೆ | 8 | 3 | 13 | 5 | 23 | 3 | |
| ಕ) ಮಂಡಳಿ ನೀರು ಸರಬರಾಜು ಯೋಜನೆ | 2 | 2 | — | — | — | — | |
| ಡ) ಒಳಚರಂಡಿ ಯೋಜನೆ | — | — | 3 | — | 4 | 2 | |
| 2. ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ | | | | | | | |
| ಅ) ನಗರ ಕೊಳಚೆಯ ಪರಿಸರ ಸುಧಾರಣೆ (ಜನಸಂಖ್ಯೆ ಒಳಗೊಂಡಂತೆ) | 60,000 | 61,578 | 70,475 | 70,435 | 62,075 | 38,794 | |
| ಬ) ಇ.ಡಬ್ಲ್ಯು.ಎ | | | | | | | |
| ಬ) ಇ.ಡಬ್ಲ್ಯು.ಎಸ್.ಮನೆಗಳು | 1,200 | 1,200 | 1,600 | 1,600 | 1,800 | 893 | |


ORGANISATION CHART OF HOUSING & URBAN DEVELOPMENT DEPARTMENT
Hon'ble Chief Minister (BDA, BCC, BWSSB, BMRDA, KUIDFC, MRTS, UD )
Hon'ble Minister of State for Housing
Hon'ble Minister of State for B'lore City Development attached to C.M.
Hon'ble Minister for U.D.
Principal Secretary
Secretary-II
Deputy Secretary(IFA)
Joint Director(Planning)
Deputy Secretary-II
Deputy Secretary-I
Under Secretary(DDA), Under Secretary(Corporation), Under Secretary(EST), Under Secretary(HOUSING)
Under Secretary(R&I), Under Secretary(U.L.C), Under Secretary(Boards), Under Secretary(L.C)

# ಭಾಗ – 1

## ವ ಸ ತಿ

### 1 ವಸತಿ ಯೋಜನೆಗಳು

1.1 ವಸತಿಯು ಜನಸಾಮಾನ್ಯನಿಗೆ ಒಂದು ಮೂಲಭೂತ ಅವಶ್ಯಕತೆಯಾಗಿದೆ. ರಾಷ್ಟ್ರೀಯ ಮಟ್ಟದಲ್ಲಿ ಹಾಗೂ ರಾಜ್ಯ ಮಟ್ಟದಲ್ಲಿಯೂ ವಸತಿ ಯೋಜನೆಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಗಿದೆ. ವಸತಿಗೆ ಸಂಬಂಧಿಸಿದಂತಹ ಯಾವುದೇ ನೀತಿಯ ಧ್ಯೇಯವು ವಸತಿಯನ್ನು ಅಧಿಕ ಮಾಡುವಂತಹದಾಗಿರಬೇಕು. ಅದರಲ್ಲೂ ಸಮಾಜದ ದುರ್ಬಲ ವರ್ಗದವರಿಗೆ ಸಹಾಯಕವಾಗಿರುವಂತೆ. ಈ ದಿಕ್ಕಿನಲ್ಲಿ ಕರ್ನಾಟಕ ಸರ್ಕಾರವು ಒಂದು ಅಧಿಕ ಪ್ರಮಾಣದ ವಸತಿ ಕಾರ್ಯಕ್ರಮವನ್ನು 'ಆಶ್ರಯ' ಮತ್ತು ಡಾ. ಅಂಬೇಡ್ಕರ್ ಶತಮಾನೋತ್ಸವ ಕಾರ್ಯಕ್ರಮ' ಯೋಜನೆಗಳಡಿಯಲ್ಲಿ ಹಮ್ಮಿಕೊಂಡಿದೆ.

ಈ ಯೋಜನೆಯ ಸಂಯುಕ್ತ ಕಾರ್ಯಕ್ರಮಗಳೆಂದರೆ:

ಅ) ನಿವೇಶನಗಳ ಹಂಚಿಕೆ ( ಆ ) ನಿರ್ಮಾಣ ಸಹಾಯ

ಆಶ್ರಯ ಯೋಜನೆಯಡಿಯಲ್ಲಿ ವಸತಿಗಳ ಹಂಚಿಕೆ

1.2 1993–94 ಮತ್ತು 1994–95ರಲ್ಲಿ ( ಡಿಸೆಂಬರ್ 94ರ ಅಂತ್ಯಕ್ಕೆ) ನಿವೇಶನಗಳ ಹಂಚಿಕೆಯ ಪ್ರಗತಿಯು ಈ ಕೆಳಕಂಡಂತಿದೆ.

| ವರ್ಷ | ಗ್ರಾಮೀಣ | ನಗರ | ಒಟ್ಟು |
|---|---|---|---|
| 1993–94 | 81,095 | 21,481 | 1,02,576 |
| 1994–95 | 1,06,547 | 16,939 | 1,23,486 |

1.3 ಕರ್ನಾಟಕ ಸರ್ಕಾರವು ಪ್ರಸಕ್ತ ಸಾಲಿನಲ್ಲಿ 2 ಲಕ್ಷ ವಸತಿ ನಿವೇಶನಗಳನ್ನು ವಿತರಿಸುವ ಅಧಿಕ ಪ್ರಮಾಣದ ಯೋಜನೆಯನ್ನು ಹೊಂದಿದೆ, ಈ ಪೈಕಿ 1,80,000 ನಿವೇಶನಗಳು ಗ್ರಾಮಾಂತರ ಪ್ರದೇಶಕ್ಕೆ ಮತ್ತು 20,000 ನಿವೇಶನಗಳು ನಗರ ಪ್ರದೇಶಕ್ಕೆ ಸಂಬಂಧಿಸಿವೆ. ಇದಕ್ಕೆ 20 ಕೋಟಿ ರೂ.ಗಳ ಅನುದಾನವು ಹಂಚಿಕೆಯನ್ನು ಮಾಡಲಾಗಿದೆ. ಡಿಸೆಂಬರ್ 1994ರ ಅಂತ್ಯಕ್ಕೆ 1,23,486 ನಿವೇಶನಗಳ ಹಂಚಿಕೆ ಮಾಡಲಾಗಿದೆ.

1.4 ರಾಜ್ಯ ಸರ್ಕಾರವು ರಾಜ್ಯದ ಎಲ್ಲಾ ಜನತೆಗೆ(ವಿಶೇಷತ: ದುರ್ಬಲ ವರ್ಗದ ಜನತೆಗೆ ನಿವೇಶನ ಕಲ್ಪಿಸಿ ಕೊಡುವ ಧ್ಯೇಯವನ್ನು ಹೊಂದಿದೆ, ಈ ದಿಸೆಯಲ್ಲಿ 1994–95ರ ಸಾಲಿಗೆ ಮನೆ ಮತ್ತು ನಿವೇಶನ ರಹಿತ ಸಂಕ್ಷಿಪ್ತ ಸಮೀಕ್ಷೆಯ ಕಾರ್ಯವನ್ನು ಕೈಗೊಂಡಿದೆ.

ಅ) <u>ನಿರ್ಮಾಣ ಸಹಾಯ</u>

1.5 ವಸತಿ ನಿರ್ಮಾಣ ಕಾರ್ಯವನ್ನು ಆಶ್ರಯ ಯೋಜನೆಯಡಿಯಲ್ಲಿ ಜಿಲ್ಲಾಧಿಕಾರಿಗಳು ಮತ್ತು ಕರ್ನಾಟಕ ಗೃಹ ಮಂಡಳಿಯು ಕಾರ್ಯಗತಗೊಳಿಸುತ್ತದೆ. ಕಳೆದ ವರ್ಷದಲ್ಲಿ ಹಂಚಿಕೆಯಾಗಿದ್ದು, ಪೂರ್ಣಗೊಳ್ಳದೆ ಉಳಿದ ಮನೆಗಳನ್ನು ಪ್ರಸಕ್ತ ವರ್ಷಕ್ಕೂ ಮುಂದುವರಿಸಲಾಗಿದೆ. ಜಿಲ್ಲಾಧಿಕಾರಿಗಳು ಹಾಗೂ ಕರ್ನಾಟಕ ಗೃಹ ಮಂಡಳಿ ವತಿಯಿಂದ ಅನುಷ್ಠಾನಗೊಳಿಸಿದ ಒಟ್ಟು ಮನೆಗಳು ಕ್ರಮವಾಗಿ 58,468 ಮತ್ತು 7,866 ಆಗಿರುತ್ತದೆ.

1.6 ಗ್ರಾಮೀಣ ವಸತಿ ನಿರ್ಮಾಣಕ್ಕೆ ಪ್ರತಿ ಮನೆಗೆ 15,000 ರೂ.ಗಳಾಗಿದ್ದು, ಇದರಲ್ಲಿ 10,000 ರೂ.ಗಳು ಸಾಲ ಮತ್ತು 5,000 ರೂ.ಗಳು ಸಹಾಯಧನವಾಗಿರುತ್ತದೆ. ಇದೇ ಪ್ರಕಾರ ನಗರ ವಸತಿ ನಿರ್ಮಾಣಕ್ಕೆ 16,000 ರೂ.ಗಳಾಗಿದ್ದು, ಇದರಲ್ಲಿ ರೂ. 14,000 ಸಾಲ ಮತ್ತು ರೂ. 5,000 ಸಹಾಯಧನವಾಗಿರುತ್ತದೆ.

1.7 ಉಲ್ಲೇಖಿತ ವರ್ಷದಲ್ಲಿ ವಸತಿ ನಿರ್ಮಾಣದ ಪ್ರಗತಿಯು ಈ ಕೆಳ ಕಂಡಂತಿದೆ.

| ವರ್ಷ | ಗ್ರಾಮೀಣ | ನಗರ | ಒಟ್ಟು |
|---|---|---|---|
| ಅ) ಡಿ.ಸಿ. | 29,860 | 2,578 | 32,438 |
| ಆ) ಕೆ.ಹೆಚ್.ಬಿ. | 3,672 | 467 | 4,139 |
| ಒಟ್ಟು | 33,532 | 3,045 | 36,577 |

ಆ) <u>ನೆರಳಿನ ಭಾಗ್ಯ</u>

1.8 ಈ ಯೋಜನೆಯ ಮುಖ್ಯ ಉದ್ದೇಶವು ಹುಲ್ಲು ಹೊದಿಕೆಯ ಸೂರಿಗೆ ಬದಲಾಗಿ ಹೆಂಚಿನ ಸೂರು ಅಥವಾ ಮುಂತಾದವುಗಳಿಂದ ಸ್ಥಳಕ್ಕೆ ಸೂಕ್ತವಾಗಿ ಕಂಡುಬಂದಂತಹ ವಸ್ತುಗಳಿಂದ ಬದಲಾಯಿಸುವುದು. 30,000 ರೂ.ಗಳು ಸಹಾಯಧನವಾಗಿದೆ. 1,00,000 ಮನೆಗಳ ಗುರಿಯನ್ನು ಹೊಂದಿದ್ದು, ~~1994-95~~ರಲ್ಲಿ 600 ಲಕ್ಷಗಳ ಆಯವ್ಯಯದ ಹಂಚಿಕೆಯನ್ನು ಹೊಂದಿದೆ. ರೂ. 24 ಕೋಟಿ ರೂ.ಗಳ ಕೊರತೆಯನ್ನು ಹೆಚ್ಚುವರಿ ಸಂಪನ್ಮೂಲಗಳಿಂದ ಸಂಗ್ರಹಿಸಿ ಸಂಪಾದಿಸಬೇಕಾಗಿದೆ. ಮಲೆನಾಡು ಪ್ರದೇಶಾಭಿವೃದ್ಧಿಯ ಕ್ರಿಯಾ ಯೋಜನೆಯಡಿ 68 ಲಕ್ಷ ರೂ.ಗಳನ್ನು ಮೀಸಲಿಡಲಾಗಿದೆ. ಮತ್ತು ವಸತಿ ಯೋಜನೆಯಡಿ 200 ಲಕ್ಷ ರೂ.ಗಳನ್ನು ಮರುಹೊಂದಾಣಿಕೆ ಮಾಡಿ ಉಪಯೋಗಿಸಲಾಗುವುದು. (ಪ್ರಾರಂಭದಲ್ಲಿ ನಿರ್ಧರಿಸಲಾದ 25,000 ಮಾಡಿಗಳ ಗುರಿಯನ್ನು ಹೊಂದಿದ್ದು, ಡಿಸೆಂಬರ 94ರ ಅಂತ್ಯಕ್ಕೆ 9428 ಮಾಡಿಗಳ ಪ್ರಗತಿಯಾಗಿರುತ್ತದೆ.

ಇ) <u>ಡಾ: ಅಂಬೇಡ್ಕರ್ ಶತಮಾನೋತ್ಸವ ಯೋಜನೆ</u>

1.9 ಈ ಕಾರ್ಯಕ್ರಮವು ಸಮಾಜ ಕಲ್ಯಾಣ ಇಲಾಖೆಯಿಂದ ಅನುಷ್ಠಾನ ಗೊಳಿಸಲಾಗುತ್ತಿದೆ. ಪ್ರತಿಯೊಂದು ಮನೆ ನಿರ್ಮಾಣ ಕಾರ್ಯಕ್ರಮದ ವೆಚ್ಚವು ಆಶ್ರಯ ಯೋಜನೆಯಡಿಯಲ್ಲಿ ಇರುವಂತೆಯೇ ಇರುತ್ತದೆ. ಅಲ್ಲದೆ, ಗ್ರಾಮೀಣ ಪ್ರದೇಶ ಜನರಿಗೆ ಪೂರ್ಣ ವೆಚ್ಚವು ಸಹಾಯಧನ ರೂಪದಲ್ಲಿರುತ್ತದೆ.

1.10 ಈ ಕೆಳಕಂಡ ತ:ಖ್ತೆ ಹಣ ಬಿಡುಗಡೆ ಹಾಗೂ ಆಯವ್ಯಯದ ವ್ಯವಸ್ಥೆಯನ್ನು ಸೂಚಿಸುತ್ತದೆ.

(ರೂ. ಕೋಟಿಗಳಲ್ಲಿ)

| ಕಾರ್ಯಕ್ರಮ | ಆಯವ್ಯಯ ಅಂದಾಜು | ಬಿಡುಗಡೆ |
|---|---|---|
| ಅ) ನಿವೇಶನಗಳು | 20.00 | 9.48 |
| ಆ) ವಸತಿ ನಿರ್ಮಾಣ | 70.98 | 55.24 |
| ಇ) ನೆರಳಿನ ಭಾಗ್ಯ | 6.00 | 6.00 |

1.11 1995–96ನೇ ಸಾಲಿಗೆ ವಸತಿಗಾಗಿ ರೂ:108.40 ಕೋಟಿ ರೂ.ಗಳನ್ನು ಆಯವ್ಯಯದಲ್ಲಿ ಅಳವಡಿಸಿದೆ. 94–95ನೇ ಸಾಲಿಗೆ ಹೋಲಿಕೆ ಮಾಡಿದ ವಿಭಜನೆಯು ಈ ಕೆಳಕಂಡಂತಿದೆ.

(ರೂ: ಲಕ್ಷಗಳಲ್ಲಿ)

| ಕಾರ್ಯಕ್ರಮ | 1994–95 | 1995–96 |
|---|---|---|
| 1) ಸಹಾಯಧನ, ಬಡ್ಡಿ ಹಾಗೂ ಇತರೆ ಮರುಪಾವತಿ | 3057.00 | 3310.44 |
| 2) ನಿವೇಶನಗಳು | 2000.00 | 1500.00 |
| 3) ನಿರ್ಮಾಣ ಸಹಾಯ (ಆಶ್ರಯ) | 7098.54 | 5698.84 |
| 4) ನೆರಳಿನ ಭಾಗ್ಯ | 600.00 | 300.00 |
| 5) ಕಾರ್ಮಿಕರಿಗೆ ಸಹಾಯಧನ | 10.00 | 10.00 |
| 6) ಜಿಲ್ಲಾ ಪಂಚಾಯತ್ ಕೆಲಸಗಾರರ ಸಂಬಳಕ್ಕಾಗಿ | 31.46 | 20.72 |
| | 12,797.00 | 10840.00 |

ಇ) ಭಾಗ್ಯ ಮಂದಿರ ವಸತಿಗಳು

1.12 ಪಟ್ಟಣ ಪ್ರದೇಶಗಳಲ್ಲಿ ಪುರಸಭೆಗಳು, ಭಾಗ್ಯ ಮಂದಿರ ವಸತಿಗಳನ್ನು ನಿರ್ಮಿಸಿವೆ. ಅಂತಿಮವಾಗಿ ಉಳಿದಿರುವ 155 ಮನೆಗಳು ಪೂರ್ಣಗೊಳ್ಳುವ ಹಂತದಲ್ಲಿದೆ. ಡಿಸೆಂಬರ 94ರ ಅಂತ್ಯಕ್ಕೆ ಪ್ರಸಕ್ತ ಸಾಲಿನ ಪ್ರಗತಿಯು 110 ಆಗಿದೆ.

ಈ) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆ

ವಸತಿಗಾಗಿ ಮೀಸಲಿಡಲಾದ ಹಣದಿಂದ ಸಮಾಜ ಕಲ್ಯಾಣ ಇಲಾಖೆಯು ಈ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತದೆ. 1994-95ನೇ ಸಾಲಿಗೆ 449 ಲಕ್ಷ ರೂ.ಗಳನ್ನು ಗಿರಿಜನ ಉಪಯೋಜನೆಯಡಿಯಲ್ಲಿ ಮತ್ತು 2278 ಲಕ್ಷ ರೂ.ಗಳನ್ನು ವಿಶೇಷ ಘಟಕ ಯೋಜನೆಯಡಿಯಲ್ಲೂ ಒಟ್ಟು ಗುರುತಿಸಲಾಗಿದೆ.

2. ಕರ್ನಾಟಕ ಗೃಹ ಮಂಡಳಿ

2.1 1956ರಲ್ಲಿ ಸ್ಥಾಪಿತವಾದ ಮೈಸೂರು ಗೃಹ ಮಂಡಳಿಯೇ ಪ್ರಸ್ತುತದಲ್ಲಿನ ಕರ್ನಾಟಕ ಗೃಹ ಮಂಡಳಿಯಾಗಿ ಕರ್ನಾಟಕ ಗೃಹ ಮಂಡಳಿ ಕಾಯಿದೆ 1962ರ ಪ್ರಕಾರ ರಚನೆಯಾಗಿದೆ. ರಾಜ್ಯದ ಪಟ್ಟಣ ಪ್ರದೇಶಗಳಲ್ಲಿನ ವಸತಿ ಬೇಡಿಕೆಗಳಿಗೆ ನೆರವು ಕೊಡುವುದು ಈ ಮಂಡಳಿಯ ಮೂಲ ಧ್ಯೇಯವಾಗಿರುತ್ತದೆ. ಅದರಂತೆಯೇ, ಹುಡ್ಕೋ ನೆರವಿನಿಂದ ವಸತಿ ನಿರ್ಮಾಣ ಕಾರ್ಯಕ್ರಮವನ್ನು ಕರ್ನಾಟಕ ಗೃಹ ಮಂಡಳಿ ಕಾರ್ಯಗತಗೊಳಿಸುತ್ತಿದೆ. ಅಲ್ಲದೆ, ಸರ್ಕಾರದ ಪ್ರಾಯೋಜಿತ ಹಾಗೂ ಸಿಬ್ಬಂದಿ ಬಾಡಿಗಾರ ಯೋಜನೆ, ಜನತಾ ಮನೆ ಯೋಜನೆ, ಭಾಗ್ಯ ಮಂದಿರ ಮತ್ತು ಇತರೆ ಯೋಜನೆಗಳಿಗೆ ಹುಡ್ಕೋ ಮತ್ತು ಇತರೆ ಆರ್ಥಿಕ ಸಂಸ್ಥೆಗಳಿಂದ ಸಾಲ ದೊರಕಿಸುವಲ್ಲಿ ಮಂಡಳಿಯು ನೋಡಲ್ ಏಜೆನ್ಸಿಯಾಗಿ ಕೆಲಸ ಮಾಡುತ್ತದೆ.

2.2 ಕರ್ನಾಟಕ ಗೃಹ ಮಂಡಳಿಯು ಪ್ರಾರಂಭಗೊಂಡ ದಿನದಿಂದ ಮಾರ್ಚ್ 1994ರ ವರೆಗೆ, ಮಂಡಳಿಯು ವಿವಿಧ ವರ್ಗಗಳಿಗೆ 96,081 ಮನೆಗಳ ನಿರ್ಮಾಣ ಮಾಡಿರುತ್ತದೆ.

2.3 207.25 ಕೋಟಿ ರೂ.ಗಳ ಯೋಜನೆಯನ್ನು 19,548 ಮನೆಗಳನ್ನು ನಿರ್ಮಿಸಲು ಮಂಡಳಿಯು ಪ್ರಸ್ತಾಪಿಸಿದೆ.

2.4 1994-95ನೇ ಸಾಲಿನಲ್ಲಿ 5595 ಮನೆಗಳನ್ನು ನಿರ್ಮಿಸುವ ಗುರಿಯನ್ನು ಮಂಡಳಿಯು ಹೊಂದಿದೆ. ಅದಕ್ಕಾಗಿ 25.33 ಕೋಟಿ ರೂ.ಗಳ ವೆಚ್ಚದಲ್ಲಿ ಡಿಸೆಂಬರ 94ರ ಅಂತ್ಯಕ್ಕೆ 1563 ಮನೆಗಳನ್ನು ನಿರ್ಮಿಸಿದೆ.

2.5 ಡಿಸೆಂಬರ್ 94ರ ಅಂತ್ಯಕ್ಕೆ ಮಂಡಳಿಯ ಯೋಜನಾ ವಾರು ಆರ್ಥಿಕ ಮತ್ತು ಭೌತಿಕ ಸಾಧನೆಯ ವಿವರ ಈ ಕೆಳಕಂಡಂತಿದೆ (1-4-93 ರಿಂದ 31-3-94)

ಭೌತಿಕ (ಸಂಖ್ಯೆಗಳಲ್ಲಿ)
ಆರ್ಥಿಕ (ಲಕ್ಷ ರೂ.ಗಳಲ್ಲಿ)

| ಕ್ರಮ ಸಂಖ್ಯೆ | ಯೋಜನೆ | 1994-95ನೇ ಸಾಲಿನಲ್ಲಿ ನಿಗದಿಪಡಿಸಿದ ಮನೆಗಳ ಸಂಖ್ಯೆ | ಡಿಸೆಂಬರ್ 1994ರ ಅಂತ್ಯದವರೆಗಿನ ಸಾಧನೆ | |
|---|---|---|---|---|
| | | | ಭೌತಿಕ | ಆರ್ಥಿಕ |
| 1. | ರಾಜ್ಯ ಯೋಜನೆ | 41 | — | 19.75 |
| 2. | ಹುಡ್ಕೋ: ಇತರೆ | 5554 | 1245 | 4506.00 |
| | ಒಟ್ಟು | 5595 | 1245 | 4525.75 |

2.6 ಪ್ರಸಕ್ತ ಸಾಲಿನಲ್ಲಿ ಡಿಸೆಂಬರ್ 1994ರ ಅಂತ್ಯದವರೆಗೆ ಮಂಡಳಿಯು ಹುಡ್ಕೋದಿಂದ 19.37 ಕೋಟಿ ರೂಗಳ ಯೋಜನಾ ವೆಚ್ಚದ 590 ಮನೆಗಳನ್ನು ಒಳಗೊಂಡಂತಹ 4 ಯೋಜನೆಗಳಿಗೆ ಮಂಜೂರಾತಿಯನ್ನು ಪಡೆದಿರುತ್ತದೆ.

2. 7 ಮಂಡಳಿಯು ಕಳೆದ ಸಾಲಿನಲ್ಲಿ ಮೈಸೂರಿನ ಬೋಗಾದಿಯಲ್ಲಿ ಮತ್ತು ಬೆಂಗಳೂರಿನ ಯಲಹಂಕದಲ್ಲಿ ಕೈಗೊಂಡ ಭಾರಿ ಪ್ರಮಾಣದ ವಸತಿ ಯೋಜನೆಗಳನ್ನು ಪ್ರಸಕ್ತ ಸಾಲಿನಲ್ಲಿಯೂ ಮುಂದುವರಿಸಲಾಗಿದೆ.

2.8 <u>ವಿಶೇಷ ಯೋಜನೆಗಳು</u>

1. <u>ಬೀಡಿ ಕಾರ್ಮಿಕರ ವಸತಿ ಯೋಜನೆ:</u>

ರಾಜ್ಯದಲ್ಲಿನ ಬೀಡಿ ಕಾರ್ಮಿಕರ ವಸತಿ ಯೋಜನೆಗೆ ಕರ್ನಾಟಕ ಗೃಹ ಮಂಡಳಿಯು ಕಾರ್ಯಕ್ರಮ ರೂಪಿಸುವಲ್ಲಿ ಮತ್ತು ಅನುಷ್ಠಾನಗೊಳಿಸುವಲ್ಲಿ ಒಂದು ಮಾರ್ಗವಾಗಿದೆ. ರಾಜ್ಯದ ವಿವಿಧ ಭಾಗಗಳಲ್ಲಿ ಈವರೆಗೂ ಮಂಡಳಿಯು 10 ವಸತಿ ಯೋಜನೆಗಳನ್ನು ರೂಪಿಸಿದೆ. ಈ ಯೋಜನೆಯಡಿ 2,733 ಮನೆ ನಿರ್ಮಾಣವನ್ನು ಕೈಗೊಂಡಿದ್ದು, 1449 ಮನೆಗಳ ನಿರ್ಮಾಣವು ಪೂರ್ಣಗೊಂಡಿದೆ. ಈ ಕಾರ್ಯಕ್ರಮದ ವೆಚ್ಚವು 600.90 ಲಕ್ಷರೂ.ಗಳೆಂದು ಅಂದಾಜು ಮಾಡಿದ್ದು, ಈ ಪೈಕಿ 451.81 ಲಕ್ಷರೂಗಳು [illegible] ಮಂಜೂರು ಮಾಡಿದೆ. 144.46 ಲಕ್ಷ ರೂಗಳು ಸರ್ಕಾರದ ಸಹಾಯಧನವಾಗಿದೆ.

2. <u>ಸ್ವಯಂ ಆರ್ಥಿಕ ವಸತಿ ಯೋಜನೆ</u>

ಸ್ವಯಂ ಆರ್ಥಿಕ ವಸತಿ ಯೋಜನೆಯಡಿ ಮೈಸೂರಿನ [illegible] ಹಳ್ಳಿಯಲ್ಲಿ 314 ಮನೆಗಳ ನಿರ್ಮಾಣ ಕಾರ್ಯವನ್ನು 1992-93ನೇ ಸಾಲಿನಲ್ಲಿ ಕೈಗೊಂಡಿತ್ತು. ಡಿಸೆಂಬರ್ 1994ರ ಅಂತ್ಯಕ್ಕೆ 26 ಮನೆಗಳ ನಿರ್ಮಾಣ ಕಾರ್ಯವು ಮುಗಿದಿರುತ್ತದೆ ಹಾಗೂ ಉಳಿದವುಗಳು ನಿರ್ಮಾಣದ ವಿವಿಧ ಹಂತದಲ್ಲಿರುತ್ತವೆ.

3) <u>ಆಶ್ರಯ ವಸತಿ ಯೋಜನೆ</u>

1991-92ರಲ್ಲಿ 2.14 ಲಕ್ಷ ಮನೆಗಳ ನಿರ್ಮಾಣ ಕಾರ್ಯವನ್ನು ಮುಖ್ಯಶಃ ಕರ್ನಾಟಕ ಗೃಹ ಮಂಡಳಿಗೆ ಒಪ್ಪಿಸಲಾಗಿತ್ತು. ನಂತರ, ಕಾರ್ಯಗತಗೊಳಿಸುವಲ್ಲಿ ಇರುವಂತಹ ತೊಂದರೆಗಳ ಕಾರಣದಿಂದ 1992-93ರಲ್ಲಿ ಈ ಗುರಿಯನ್ನು 1.06 ಲಕ್ಷಕ್ಕೆ ಇಳಿಸಿ, ಜಿಲ್ಲಾಧಿಕಾರಿಗಳು ಮತ್ತು ಗೃಹ ಮಂಡಳಿಯು 66,000 ಮತ್ತು 40,000 ಪ್ರಮಾಣದಲ್ಲಿ ನಿರ್ಮಿಸುವಂತೆ ಮಾಡಲಾಯಿತು. 1993-94ರಲ್ಲಿ ಇದನ್ನು 14,719ಕ್ಕೆ ಬದಲಾಯಿಸಿ ಗೃಹ ಮಂಡಳಿಯ ಗುರಿಯನ್ನು ಮತ್ತಷ್ಟು ಇಳಿಸಿ, ಉಳಿದವುಗಳನ್ನು ಜಿಲ್ಲಾಧಿಕಾರಿಗಳಿಂದ ಸಂಪೂರ್ಣಗೊಳಿಸುವಂತೆ ಮಾಡಲಾಯಿತು. ಅಲ್ಲದೆ ಡಿಸೆಂಬರ್ 94 ರವರೆಗೆ 9838 ಗ್ರಾಮ ವಸತಿಗಳನ್ನು ಮತ್ತು 1154 ಪಟ್ಟಣ ವಸತಿಗಳನ್ನು ಒಟ್ಟು 10,992 ಮನೆಗಳನ್ನು ಮಂಡಳಿಯು ನಿರ್ಮಿಸಿದೆ.

4) <u>ಡಾ.ಅಂಬೇಡ್ಕರ್ ವಸತಿ ಯೋಜನೆ:</u>

ಡಾ. ಅಂಬೇಡ್ಕರ್ ಜನ್ಮ ಶತಾಬ್ಧಿ ಕಾರ್ಯಕ್ರಮದಡಿ 1992-93ನೇ ಸಾಲಿನಲ್ಲಿ, 29880 ಮನೆಗಳನ್ನು ನಿರ್ಮಿಸಲು ಸರ್ಕಾರ ಪ್ರಸ್ತಾಪಿಸಿದಿತು. ಹುಡ್ಕೋ ಮತ್ತು ಸರ್ಕಾರದ ನಡುವೆ ನೋಡಲ್ ಏಜೆನ್ಸಿಯಾಗಿ ವರ್ತಿಸಿ 10,000 ಪಟ್ಟಣದ ಮನೆಗಳ ಯೋಜನೆಗೆ ಸಾಲವನ್ನು ಪಡೆಯುವ ಜವಾಬ್ದಾರಿಯನ್ನು ಕರ್ನಾಟಕ ಗೃಹ ಮಂಡಳಿಗೆ ವಹಿಸಲಾಗಿತ್ತು. ಅಂತೆಯೇ, ಕರ್ನಾಟಕ ಗೃಹ ಮಂಡಳಿಯು ಯೋಜನೆಯನ್ನು ರೂಪಿಸಿ 4500 ಮನೆಗಳಿಗೆ 495.00 ಲಕ್ಷ ರೂ.ಗಳ ಮಂಜೂರಾತಿಯನ್ನು ಪಡೆದಿದ್ದು, ಈ ಪೈಕಿ 94.46 ಲಕ್ಷ ರೂ.ಗಳನ್ನು 9 ಜಿಲ್ಲಾಧಿಕಾರಿಗಳಿಗೆ ಹಂಚಿಕೆ ಮಾಡಲಾಗಿದೆ. ಉಳಿದ 5500 ಮನೆಗಳಿಗೂ ಮಂಜೂರಾತಿಯನ್ನು ಪಡೆದಿದ್ದು ಈ ಹಣವನ್ನು ಮಂಡಳಿಯು ಇನ್ನು ಪಡೆಯಬೇಕಾಗಿದೆ.

5) <u>ಪ್ರವಾಹ ಮತ್ತು ಬಿರುಗಾಳಿಗೆ ತುತ್ತಾದ ಸಂತ್ರಸ್ತರಿಗೆ ವಿಶೇಷ ವಸತಿ ಯೋಜನೆ:</u>

ಅಕ್ಟೋಬರ್, ನವೆಂಬರ್ 1992ರ ಪ್ರವಾಹಕ್ಕೆ ತುತ್ತಾದ ರಾಜ್ಯದಲ್ಲಿನ ಪ್ರವಾಹ ಸಂತ್ರಸ್ತರಿಗೆ ಮನೆಗಳನ್ನು ನಿರ್ಮಿಸಲು ಹುಡ್ಕೋದಿಂದ ಸಾಲ ಪಡೆಯುವ ಬಗ್ಗೆ ಒಂದು ಯೋಜನೆಯನ್ನು ರೂಪಿಸುವಂತೆ ಕರ್ನಾಟಕ ಗೃಹ ಮಂಡಳಿಗೆ ಕರ್ನಾಟಕ ಸರ್ಕಾರವು ನಿರ್ದೇಶಿಸಿತ್ತು. ಅದರಂತೆ, 28,449 ಮನೆಗಳನ್ನು ಹೊಂದಿರುವಂತಹ 4 ಯೋಜನೆಗಳನ್ನು ಕರ್ನಾಟಕ ಗೃಹ ಮಂಡಳಿ ರೂಪಿಸಿದ್ದು, ಹುಡ್ಕೋ 1706.94 ಲಕ್ಷ ರೂಗಳನ್ನು ಸಾಲವಾಗಿ ನೀಡಿರುತ್ತಾರೆ. ವಿವರಗಳು ಈ ಕೆಳಕಂಡಂತಿವೆ.

ಲಕ್ಷ ರೂಗಳಲ್ಲಿ)

| ವಸತಿ ಯೋಜನೆ | ಘಟಕಗಳ ಸಂಖ್ಯೆ | ಯೋಜನಾ ವೆಚ್ಚ | ಮಂಜೂರಾದ ಸಾಲ | ಸಾಲ ಪಡೆದಿದ್ದು | ಸಹಾಯ ಧನ | ಸಹಾಯ ಧನ |
|---|---|---|---|---|---|---|
| ಪ್ರವಾಹ ಮತ್ತು ಬಿರುಗಾಳಿಗೆ ತುತ್ತಾದ ಇತಬಲ್ಯಾಕ್ಷವಿಸ್ ಮತ್ತು ...ಹದವಿಸ್ ಮನೆಗಳನ್ನು ಹೊಂದಿದ ಜಿಲ್ಲೆಗಳು | | | | | | |
| 1. ರಾಯಚೂರು | 10478 | 1471.70 | 678.68 | 157.16 | 471.51 | 117.8 |
| 2. ಬಳ್ಳಾರಿ | 9225 | 1488.75 | 595.50 | 148.86 | 446.63 | 111.0 |
| 3. ಧಾರವಾಡ | 4746 | 711.90 | 284.76 | 71.16 | 213.57 | 53.37 |
| 4. ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಬಿಜಾಪುರ ದ.ಕನ್ನಡ, ಮತ್ತು ಕೊಡಗು. | 3300 | 495.00 | 198.00 | 49.50 | 148.50 | 37.12 |
| ಒಟ್ಟು | 27749 | 4467.35 | 1756.94 | 426.68 | 1280.21 | 319.29 |

2.9 ಜನತಾ ವಸತಿ ಯೋಜನೆ, ನೆಹರೂ ರೋಜಗಾರ ಯೋಜನೆ, ಭಾಗ್ಯ ಮಂದಿರ ಮತ್ತು ಆಶ್ರಯ ಯೋಜನೆಗಳಡಿಯಲ್ಲಿ ಸರ್ಕಾರದ ಪರವಾಗಿ ಮಂಡಳಿಯು ಪಡೆದಿರುವ ಸಾಲ ಹಿಂತಿರುಗಿಸುವ ಸಲುವಾಗಿ ರಾಜ್ಯ ಆಯವ್ಯಯದಲ್ಲಿ ಹಂಚಿಕೆ ಮಾಡಲಾಗಿದೆ.

## 3. ಕರ್ನಾಟಕ ರಾಜ್ಯ ನಿರ್ಮಿತಿ ಕೇಂದ್ರ (ಕಾರ್ನಿಕ್)

ರಾಜ್ಯ ಸರ್ಕಾರಕ್ಕೆ ಅವಶ್ಯಕವಾದ ತಾಂತ್ರಿಕ ಸಹಾಯ ನೀಡುವ ಕಾರ್ಯವನ್ನು ರಾಜ್ಯ ಧನ ಸಹಾಯ ಪಡೆದಿರುವ ಕಾರ್ನಿಕ್ ಸಂಸ್ಥೆಗೆ ವಹಿಸಲಾಗಿದೆ. ಕರ್ನಾಟಕ ರಾಜ್ಯದ ರಾಷ್ಟ್ರೀಯ ವಸತಿ ನೀತಿಗೆ ಸಂಬಂಧಿಸಿದಂತೆ ತಾಂತ್ರಿಕ ಕಾರ್ಯಾನುಷ್ಠಾನವನ್ನು ಸಹ ನೀಡಿದೆ. ಪ್ರಸಕ್ತ 94-95ನೇ ಸಾಲಿಗೆ ಆಯವ್ಯಯದಲ್ಲಿ 10 ಲಕ್ಷ ರೂ.ಗಳ ಹಂಚಿಕೆಯನ್ನು ಈ ಸಂಸ್ಥೆಗೆ ಮಾಡಲಾಗಿದೆ.

ಈ ಸಂಸ್ಥೆಯು 2813 ಮಂದಿ ಸಿಬ್ಬಂದಿಗೆ ಪ್ರಸಕ್ತ ಸಾಲಿನಲ್ಲಿ ತರಬೇತಿಯನ್ನು ನೀಡಿದೆ. ಈ ಪೈಕಿ 71 ಮಂದಿಯನ್ನು ಅಭಿವೃದ್ಧಿ ಇಲಾಖೆಗಳಿಂದಲೂ ಮತ್ತು 2742 ಮಂದಿಯನ್ನು ನೆಹರೂ ರೋಜಗಾರ ಯೋಜನೆಯಿಂದಲೂ ಆಯ್ಕೆಮಾಡಿಕೊಳ್ಳಲಾಗಿದೆ.

-0oo0-

## ಭಾಗ-2

## ನಗರ ನೀರು ಸರಬರಾಜು ಮತ್ತು ನೈರ್ಮಲ್ಯ

### 4 ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ

4.1 ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯು ರಾಜ್ಯ ವಿಧಾನ ಮಂಡಳದ ಅಧಿನಿಯಮದ ಮೇರೆಗೆ 1964ರ ಅಕ್ಟೋಬರನಲ್ಲಿ ಅಸ್ತಿತ್ವಕ್ಕೆ ಬಂದಿದೆ. ಅದರಂತೆ, ಮಂಡಳಿಯು ಬೆಂಗಳೂರು ಮಹಾ ನಗರಕ್ಕೆ ಶುದ್ಧ ಕುಡಿಯುವ ನೀರನ್ನು ಪೂರೈಸುವ ಮತ್ತು ನಿರ್ಮಲೀಕರಣ, ಒಳ ಚರಂಡಿ ವ್ಯವಸ್ಥೆ ಅಳವಡಿಸುವ ಹಾಗೂ ಅಭಿವೃದ್ಧಿ ಪಡಿಸುವ ಹೊಣೆಗಾರಿಕೆಯನ್ನು ಹೊತ್ತಿದೆ. ಮುಂದಿನ ಅವಶ್ಯಕತೆಗನು ಗುಣವಾಗಿ ಹೆಚ್ಚಿನ ಪ್ರಮಾಣದ ನೀರನ್ನು ಒದಗಿಸುವ ಕಾರ್ಯಕ್ರಮದ ಜವಾಬ್ದಾರಿಯೂ ಜಲ ಮಂಡಳಿಗಿದೆ.

4.2 ಈಗ ಬೆಂಗಳೂರು ನಗರಕ್ಕೆ ಮೂರು ನದಿ ಮೂಲಗಳಿಂದ ಸರಬರಾಜು ಆಗುತ್ತಿರುವ ನೀರಿನ ಪ್ರಮಾಣ ಈ ರೀತಿ ಇರುತ್ತದೆ.

| | | |
|---|---|---|
| ಹೆಸರು ಘಟ್ಟ ಜಲಾಶಯ | .. | 10 ದಶಲಕ್ಷ ಲೀಟರ್ |
| ತಿಪ್ಪಗೊಂಡನಹಳ್ಳಿಯ ಚಾಮರಾಜಸಾಗರ ಜಲಾಶಯ | .. | 100 ದಶಲಕ್ಷ ಲೀಟರ್ |
| ಕಾವೇರಿ ನೀರು ಸರಬರಾಜಿನ ಯೋಜನೆ (ಮೂರನೇ ಹಂತ) | .. | 389 ದಶಲಕ್ಷ ಲೀಟರ್ |
| ಒಟ್ಟು | .. | 499 ದಶಲಕ್ಷ ಲೀಟರ್ |

4.3 ಅಂತರಾಷ್ಟ್ರೀಯ ಮಾನದ ಪ್ರಕಾರ ದಿನಪ್ರತಿ ತಲಾ 200 ಲೀಟರ್ ನೀರಿನ ಅವಶ್ಯಕತೆ ಎಂದು ತಿಳಿದು ಬಂದಿದೆ. ಇದಕ್ಕೆ ಅನುಗುಣವಾಗಿ ಜಲ ಮಂಡಳಿಯು ನಾಗರೀಕರಿಗೆ ನೀರನ್ನು ಪೂರೈಸುವ ವ್ಯವಸ್ಥಿತ ಯೋಜನೆಯನ್ನು ಮುಟ್ಟಲಾರದ ಕಾರಣ ಸದ್ಯಕ್ಕೆ ನಾಗರೀಕರಿಗೆ ದಿನಪ್ರತಿ ತಲಾ 90 ಲೀಟರ್ ನೀರು ದೊರೆಯುವಂತೆ [illegible] ದಿನಗಳಲ್ಲೂ ನಿಯಮಿತ ವೇಳೆಯಲ್ಲಿ ನೀರು ಸರಬರಾಜು ಮಾಡಲಾಗುತ್ತಿದೆ.

4.4 ಬೆಂಗಳೂರು ನಗರ [illegible] 2.5 ಲಕ್ಷ ಗೃಹ ಬಳಕೆ ಹಾಗೂ ನಗರದ ವಿವಿಧ ಭಾಗಗಳಲ್ಲಿ 5440 ಬೀದಿ ಕೊಳಾಯಿಗಳು ಇರುತ್ತವೆ. ಇದಲ್ಲದೆ 1984 ರಿಂದ ಈಚೆಗೆ ಮಂಡಳಿಯ ವತಿಯಿಂದ ಸುಮಾರು 2100 ಕೊಳವೆ ಭಾವಿಗಳನ್ನು, ವಿವಿಧ ಹಂತಗಳಲ್ಲಿ ಕೊರೆಸಲಾಗಿದೆ.

4.5 ಬೆಂಗಳೂರು ಮಹಾನಗರ ಪಾಲಿಕೆಯಿಂದ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಮತ್ತು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಯಿಂದ ಕ್ರಮವಾಗಿ 574, 400 ಮತ್ತು 300 ಕೊಳವೆ ಬಾವಿಗಳನ್ನು ಜಲ ಮಂಡಳಿಗೆ ಉಸ್ತುವಾರಿಗಾಗಿ ವರ್ಗಾಯಿಸಲಾಗಿರುತ್ತದೆ.

4.6 ನಗರದ ನಾಗರೀಕರ ದೂರಿನ ನಿವಾರಣೆಗಾಗಿ ಮತ್ತು ಕುಡಿಯುವ ನೀರಿನ ಸುವ್ಯವಸ್ಥಿತ ವಿತರಣೆಯ ಸಲುವಾಗಿ 36 ಸೇವಾ ಠಾಣೆಗಳನ್ನು ಜಲ ಮಂಡಳಿಯು ಹೊಂದಿದೆ. ಶೀಘ್ರ ಸಂಪರ್ಕ ವ್ಯವಸ್ಥೆ ಕಲ್ಪಿಸುವ ಸಲುವಾಗಿ ಉತ್ತಮ ಜೋಡನೆಯ ವೈರ್‌ಲೆಸ್ ಸಂಪರ್ಕವನ್ನು 1992ರಲ್ಲಿ ಹೊಂದಲಾಯಿತು.

4.7 ಮಂಡಳಿಯ ಆದಾಯದ ಶೇಕಡ 65 ಭಾಗ ವಿದ್ಯುತ್ ವೆಚ್ಚಕ್ಕಾಗಿ ಶೇಕಡ 18ರ ಭಾಗ ಸಿಬ್ಬಂದಿ ನಿರ್ವಹಣೆ ವೆಚ್ಚಕ್ಕಾಗಿ ಹಣ ವ್ಯಯವಾಗುತ್ತಿದೆ. ಮಂಡಳಿಯು ಮಾಹೆಯಾನ ಶೇಕಡ 20 ರಷ್ಟು ಆದಾಯದ ಕೊರತೆಯನ್ನು ಅನುಭವಿಸುತ್ತಿದೆ. ಆದಾಯದ ಕೊರತೆಯನ್ನು ಭರಿಸುವ ಸಲುವಾಗಿ ಮಂಡಳಿಯು ನೀರಿನ ದರವನ್ನು ಹೆಚ್ಚಿಸಲು ಸರ್ಕಾರದ ಮುಂದೆ ಪ್ರಸ್ತಾವನೆಯನ್ನು ಮಂಡಿಸಿದೆ.

ಯೋಜನಾ ಕಾರ್ಯಕ್ರಮ

4.8 ಕಾವೇರಿ 3ನೇ ಹಂತ:– ಬೆಂಗಳೂರು ನಗರಕ್ಕೆ ದಿನಂಪ್ರತಿ 270 ದಶಲಕ್ಷ ಲೀಟರ್ ಹೆಚ್ಚುವರಿ ನೀರನ್ನು ಒದಗಿಸುವ ಕಾವೇರಿ 3ನೇ ಹಂತದ ಯೋಜನೆಯನ್ನು ರೂ:240 ಕೋಟಿ ಅಂದಾಜು ವೆಚ್ಚದಲ್ಲಿ ಪ್ರಾರಂಭಿಸಿದ ಕಾರ್ಯವನ್ನು ಮೇ 1993ರಲ್ಲಿ ಉದ್ಘಾಟಿಸಲಾಯಿತು. ಈಗ ದಿನಂಪ್ರತಿ 48 ಮಿಲಿಯನ್ ಗ್ಯಾಲನ್ ನೀರು ಸರಬರಾಜು ಮಾಡಲಾಗುತ್ತಿದೆ. ಹಂತ ಹಂತವಾಗಿ ದಿನಂಪ್ರತಿ 60 ಮಿ.ಗ್ಯಾ.ಗೆ ಏರಿಸುವ ಪ್ರಯತ್ನವನ್ನು ಸಹ ಮಾಡಲಾಗುತ್ತಿದೆ. ಇದುವರೆಗೆ ಈ ಯೋಜನೆಯಲ್ಲಿ ಒಟ್ಟು ಖರ್ಚಾದ ಹಣ ರೂ: 248.16 ಕೋಟಿ.

4.9 ನಗರದಲ್ಲಿ ನೀರು ವಿತರಣಾ ಕೇಂದ್ರಗಳ ಪೈಕಿ ಹಲವು ನೆಲಮಟ್ಟದ ಜಲಾಗಾರಗಳು, ಕೇತಮಾರನಹಳ್ಳಿ, ಹೆಣ್ಣೂರು ಕಾಲೋನಿ, ಭೈರಸಂದ್ರ, ಹೈಗ್ರೌಂಡ್ಸ್ ಮತ್ತು ಬಾಣಸವಾಡಿಗಳಲ್ಲಿ ಪೂರ್ಣಗೊಂಡಿದ್ದು ಏರೋ ಇಂಜಿನ್ ಮತ್ತು ಕತ್ತರಿಗುಪ್ಪೆಯಲ್ಲಿ ನೆಲಮಟ್ಟದ ಜಲಾಗಾರ ಕಾರ್ಯ ಪ್ರಗತಿಯಲ್ಲಿದೆ. ಏಳು ಮೇಲ್ಮಟ್ಟದ ಜಲಾಗಾರದ ಕಾರ್ಯಗಳು ಬನಶಂಕರಿ 1 ಮತ್ತು 2ನೇ ಹಂತ, ವಿಲ್ಸನ್ ಗಾರ್ಡನ್, ಹಿ.ಜೆ.ಎಸ್, ಕೋಲ್ಸ್‌ಪಾರ್ಕ್, ಜೆ.ಸಿ. ನಗರ ಮತ್ತು ಬಾಷ್ಯಂ ಪಾರ್ಕ್ ಮುಗಿದಿದೆ. ನಾಲ್ಕು ಮೇಲ್ಮಟ್ಟದ ಜಲಾಗಾರದ ಕಾರ್ಯಗಳು ಮಹಾಲಕ್ಷ್ಮಿ ಬಡಾವಣೆ

ನಂದಿ ದುರ್ಗ್ ರೋಡ್, ರಾಜಾಜಿನಗರ ಮತ್ತು ಹೆಚ್.ಎ.ಎಲ್.2ನೇ ಘಟ್ಟ ಪ್ರಗತಿಯಲ್ಲಿರುತ್ತದೆ. ಬೃಹತ್ ವಿತರಣಾ ಕೊಳವೆಗಳನ್ನು ಹಾಕುವ ಕೆಲಸ ಮುಗಿದಿದ್ದು, ಇತರೇ ಕೆಲಸಗಳು ಪ್ರಗತಿಯಲ್ಲಿವೆ.

4.10 ಒಳ ಚರಂಡಿ ವ್ಯವಸ್ಥೆಯಡಿಯಲ್ಲಿ, ಕೋರಮಂಗಲ ಮತ್ತು ಚಲ್ಲಘಟ್ಟ ಕೊಳವೆಯಲ್ಲಿನ ಒಳ ಚರಂಡಿ ನೀರಿನ ಶುದ್ಧೀಕರಣ ಘಟಕ ಕಾರ್ಯ 1991ರಲ್ಲಿ ಪೂರ್ಣಗೊಂಡಿದ್ದು, ಘಟಕ ಕೆಲಸವನ್ನು ನಿರ್ವಹಿಸುತ್ತಿದೆ. ವೃಷಭಾವತಿ ಮತ್ತು ಹೆಬ್ಬಾಳ ಕಣಿವೆಯಲ್ಲಿನ ಒಳ ಚರಂಡಿ ಶುದ್ಧೀಕರಣ ಘಟಕದ ಕೆಲಸಗಳು ಪ್ರಗತಿಯಲ್ಲಿವೆ.

4.11 <u>ಕಾವೇರಿ ನೀರು ಸರಬರಾಜು 4ನೇ ಹಂತ</u>:— ಬೆಂಗಳೂರು ನಗರವು ಅತಿ ಶೀಘ್ರ ರೀತಿಯಲ್ಲಿ ಬೆಳೆಯುತ್ತಿರುವುದರಿಂದ, ಕಾವೇರಿ ನೀರು ಸರಬರಾಜು ಯೋಜನೆ ಪೂರ್ಣಗೊಳಿಸಿದ್ದರೂ ಸಹ, ನಗರಕ್ಕೆ ನೀರಿನ ಬವಣೆ ಹೆಚ್ಚುತ್ತಿದೆ. ಆದ್ದರಿಂದ ನಗರಕ್ಕೆ ಹೆಚ್ಚುವರಿ 540 ದಶ ಲಕ್ಷ ಲೀಟರನ್ನು ಒದಗಿಸುವ ಸಲುವಾಗಿ ಕಾವೇರಿ 4ನೇ ಯೋಜನೆಯನ್ನು ಎರಡು ಹಂತಗಳಲ್ಲಿ ಕೈಗೊಳ್ಳಲು ಉದ್ದೇಶಿಸಲಾಗಿದೆ. ಈ ದಿಸೆಯಲ್ಲಿ ಸರ್ಕಾರೀ ಆದೇಶ ಸಂಖ್ಯೆ: ನಾಇ 15 ಎಐಎಸ್ 90, ದಿನಾಂಕ 27—7—94ರ ಆಡಳಿತಾತ್ಮಕ ಮಂಜೂರಾತಿ ಮೇರೆಗೆ ಈ ಕೆಳಗೆ ತಿಳಿಸಿರುವ ಹಣದ ವ್ಯವಸ್ಥೆಯಡಿಯಲ್ಲಿ, ಪ್ರಥಮ ಹಂತದ ಕಾರ್ಯಕ್ರಮವನ್ನು ಕೈಗೊಂಡು ಪ್ರಾಥಮಿಕವಾಗಿ ನಡೆಸಬೇಕಾದ ಸರ್ವೆ, ವಿನ್ಯಾಸ ಮತ್ತು ಭೂ ಸ್ವಾಧೀನ ಕಾರ್ಯಕ್ರಮಗಳು.

ಪ್ರಥಮ ಹಂತದ ಕೆಲಸಗಳ ಹಣ ಸಂಗ್ರಹಣೆಯು ಮೂಲದ ಈ ರೀತಿ ಇರುತ್ತದೆ.

| | | |
|---|---|---|
| 1. | ಕರ್ನಾಟಕ ರಾಜ್ಯ ಸರ್ಕಾರದ ಅಂಶದಾನ | .. ರೂ:100.00 ಕೋಟಿ |
| 2. | ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಗಳ ಪಾಲು. | .. ರೂ: 50.00 ಕೋಟಿ |
| 3. | ಮಂಡಳಿಯ ಆಂತರಿಕ ಸಂಪನ್ಮೂಲ | .. ರೂ: 50.00 ಕೋಟಿ |
| 4. | ಹಣಕಾಸು ಸಂಸ್ಥೆಗಳಿಂದ ಸಾಲ | .. ರೂ:340.00 ಕೋಟಿ |
| | ಒಟ್ಟು ಮೊತ್ತ | ರೂ:540.00 ಕೋಟಿ |

4.12 <u>ಇತರೇ ಯೋಜನೆಗಳು</u>:— ಈ ಮೇಲಿನ ಎರಡು ಯೋಜನೆಗಳ ಜೊತೆಗೆ ಮಂಡಳಿಯು ಇತರೆ ಯೋಜನಾ ಕಾರ್ಯಕ್ರಮಗಳನ್ನು ಸಹ ಜಾರಿಗೊಳಿಸುತ್ತಿದೆ. ಅವುಗಳೆಂದರೆ:—

ಅ) ಶಿಥಿಲಗೊಂಡ ನಳಿಕೆ ಪೈಪುಗಳನ್ನು ಪುನರುಜ್ಜೀವನಗೊಳಿಸುವುದು.

ಆ) ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆಯಲ್ಲಿ 50 ದಶಲಕ್ಷ ಲೀಟರ್ ಕೊಳಚೆ ನೀರಿನ ತೃತೀಯ ನಿರ್ಮಲೀಕರಣ ಘಟಕ.

ಇ) ಹೆಸರು ಘಟ್ಟದಲ್ಲಿ ನೀರಿನ ಶುದ್ಧೀಕರಣ ಘಟಕ ಸ್ಥಾಪನೆ.

ಈ) ಬೆಂಗಳೂರು ನಗರದಲ್ಲಿನ ತುಕ್ಕು ಹಿಡಿದ ಕೊಳವೆಗಳನ್ನು ಬದಲಾಯಿಸುವ ಕಾರ್ಯ.

ಅ) ತಿಪ್ಪಗೊಂಡನಹಳ್ಳಿಯಲ್ಲಿರುವ ಪಂಪ್ ಮತ್ತು ಮೋಟಾರ್‌ಗಳು ಸುಮಾರು 50 ವರ್ಷಗಳಿಂದ ಚಾಲನೆಯಲ್ಲಿದ್ದು ಈಗ ಅವುಗಳನ್ನು ಬದಲಾಯಿಸುವ ಕಾರ್ಯ ಒದಗಿಬಂದಿದೆ. ರೂ:2498.41 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಹುಡ್ಕೋ ಧನ ಸಹಾಯದೊಂದಿಗೆ ಈ ಪಂಪುಗಳ ಪುನರುಜ್ಜೀಕರಣ ಕಾರ್ಯ ಪ್ರಾರಂಭಿಸಬೇಕಾಗಿದೆ. ಸರ್ಕಾರದ ಅನುಮತಿ ದೊರೆತಿದ್ದು ಈ ವರ್ಷದ ಆಯವ್ಯಯದಲ್ಲಿ ರೂ:225 ಲಕ್ಷಗಳನ್ನು ಅಳವಡಿಸಿದೆ. ಟೆಂಡರ್ ಕರೆದಿದ್ದು ಕಾರ್ಯಕ್ರಮ ಪ್ರಗತಿಯಲ್ಲಿದೆ.

ಆ) ಕೈಗಾರಿಕೆಗಳಿಗೆ ಬೇಕಾಗುವ ನೀರಿನ ಬೇಡಿಕೆಯನ್ನು ಇದುವರೆಗೆ ನಗರಕ್ಕೆ ಪೂರೈಸುವ ಕುಡಿಯುವ ನೀರಿನಿಂದಲೇ ಪೂರೈಸಲಾಗುತ್ತಿತ್ತು. ಈ ಉದ್ದೇಶಕ್ಕೆ ಬಳಸುವ ಕುಡಿಯುವ ನೀರನ್ನು ಉಳಿತಾಯಗೊಳಿಸುವ ಸಲುವಾಗಿ ಜಲ ಮಂಡಳಿಯು ಕೆ. ಅಂಡ್ ಸಿ. ಕಣಿವೆಯಲ್ಲಿ 50 ಲಕ್ಷ ಲೀಟರ್ ಸಾಮರ್ಥ್ಯದ ಘಟಕವನ್ನು ಅಳವಡಿಸುವ ಯೋಜನೆಯನ್ನು ರೂ:1739-21 ಲಕ್ಷ ಅಂದಾಜು ವೆಚ್ಚದಲ್ಲಿ ಹಾಕಿಕೊಂಡಿದೆ. ಹುಡ್ಕೋ ಸಂಸ್ಥೆ ಕೇವಲ ರೂ:1500 ಲಕ್ಷ ಸಾಲವನ್ನು ಕೊಡುವುದಾಗಿ ತಿಳಿಸಿದೆ. ಆದರೆ ಬ್ಯಾಂಕ್ ಸಂಸ್ಥೆ ನಡೆಸಿರುವ ಅಧ್ಯಯನವನ್ನು ಪರಿಶೀಲಿಸಿದರೆ, ನೀರಿನ ಬೇಡಿಕೆಯು ಮಂಡಳಿ ಯೋಜಿಸಿರುವ 50 ದಶ ಲಕ್ಷ ಲೀಟರ್ ದಿನಂ ಪ್ರತಿಗಿಂತ ಬಹಳ ಕಡಿಮೆ ಇರುವ ಕಾರಣ ಈ ಯೋಜನೆಯಲ್ಲಿ ತೆಗೆದುಕೊಳ್ಳುವ ಘಟಕಗಳ ಸಾಮರ್ಥ್ಯವನ್ನು ಕಡಿಮೆ ಮಾಡಿ ಪರಿಷ್ಕೃತ ಯೋಜನೆಯನ್ನು ಸಿದ್ಧಪಡಿಸಬೇಕಾಗುವುದು.

ಇ) ಹೆಸರು ಘಟ್ಟದಲ್ಲಿ ದಿನಂಪ್ರತಿ 32 ದಶಲಕ್ಷ ಲೀಟರ್ ಸಾಮರ್ಥ್ಯದ ನೀರು ಶುದ್ಧೀಕರಣ ಘಟಕ, ಪಂಪ್ ಅಳವಡಿಕೆ ಮತ್ತು ಬೆಂಗಳೂರು ತನಕ ಕೊಳವೆ ಹಾಕಲು ರೂ.528.55 ಲಕ್ಷ ಅಂದಾಜು ವೆಚ್ಚದ ಪ್ರಸ್ತಾವನೆಯುಳ್ಳ ಹೊಸ ಯೋಜನೆಯನ್ನು ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಾಲಿನಲ್ಲಿ ರೂ:75 ಲಕ್ಷ ಆಯವ್ಯಯದಲ್ಲಿ ಒದಗಿಸಿದ್ದು, ಯೋಜನೆಗೆ ಸರ್ಕಾರ ಅನುಮತಿ ನೀಡಿದೆ. ಕಾಮಗಾರಿ ಪ್ರಗತಿಯಲ್ಲಿದೆ.

ಈ) ಬೆಂಗಳೂರು ನಗರದಲ್ಲಿ ತುಕ್ಕು ಹಿಡಿದಿರುವ ಕೊಳವೆಗಳನ್ನು ಬದಲಾಯಿಸುವ ಸಲುವಾಗಿ ರೂ:534.62 ಲಕ್ಷ ಅಂದಾಜು ವೆಚ್ಚದಲ್ಲಿ ಜಲ ಮಂಡಳಿ ನಿರೂಪಿಸಿದೆ. ಪ್ರಸ್ತುತ ಸಾಲಿನಲ್ಲಿ ಈ ಕಾರ್ಯಕ್ರಮಕ್ಕೆ ಆಯವ್ಯಯದಲ್ಲಿ ರೂ:75.00 ಲಕ್ಷ ಹಣವನ್ನು ಅಳವಡಿಸಿ ಕಾರ್ಯಕ್ರಮ ಜಾರಿಗೊಳಿಸಲು ಸರ್ಕಾರ ಅನುಮತಿ ನೀಡಿದೆ.

<u>ಬೇಡಿಕೆ, ವಸೂಲಿ, ಬಾಕಿ:—</u>

| ಬೇಡಿಕೆ | ವಸೂಲಿ | ಬಾಕಿ |
|---|---|---|
| ರೂ:1047.39 ಲಕ್ಷ | ರೂ:6758.67 ಲಕ್ಷ | ರೂ:3648.72 ಲಕ್ಷ |

## 5. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ

5.1 ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು 1974ರಲ್ಲಿ ಕರ್ನಾಟಕ ರಾಜ್ಯದ ಕಾಯಿದೆಯನ್ವಯ ಸ್ಥಾಪಿತಗೊಂಡು 1975 ರಿಂದ ಕಾರ್ಯಗತಗೊಂಡಿರುತ್ತದೆ. ನಗರ ಪ್ರದೇಶಗಳಲ್ಲಿ (ಬೆಂಗಳೂರು ನಗರವನ್ನು ಹೊರತು ಪಡಿಸಿ) ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ, ಕಾರ್ಯವಿನ್ಯಾಸ ಹಾಗೂ ಕಾರ್ಯನಿರ್ವಹಣೆ ಕಾರ್ಯಕ್ರಮಗಳು ಮಂಡಳಿಯ ಜವಾಬ್ದಾರಿಯಾಗಿದೆ.

5.2 ರಾಜ್ಯದಲ್ಲಿ ಪಂಚಾಯತಿ ರಾಜ್ ಕಾಯಿದೆಯನ್ವಯ ಜಿಲ್ಲಾ ಪರಿಷತ್ ರೂಪಗೊಂಡಿರುವುದರಿಂದ ಮಂಡಳಿಯ ವ್ಯಾಪ್ತಿಯಲ್ಲಿದ್ದ 70 ಪಟ್ಟಣಗಳು ಮಂಡಲ ಪಂಚಾಯತಿಗೆ ವರ್ಗಾಯಿಸಲಾಗಿದೆ. ಹೀಗಾಗಿ 1991ರ ಜನಗಣತಿಯ ಪ್ರಕಾರ ಸುಮಾರು 91 ಲಕ್ಷ ಜನಸಂಖ್ಯೆವುಳ್ಳ 172 ಪಟ್ಟಣಗಳು ಮಂಡಳಿಯ ವ್ಯಾಪ್ತಿಯಲ್ಲಿಯೇ ಉಳಿದಿದೆ.

5.3 ಮಂಡಳಿಯು ಈ ಕೆಳಗೆ ನಮೂದಿಸಿದ ಕಾರ್ಯಕ್ರಮಗಳಡಿಯಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಕಾಮಗಾರಿಗಳನ್ನು ಜಾರಿ ಮಾಡುತ್ತದೆ. ಇದಕ್ಕೆ 1994-95ರ ಸಾಲಿಗೆ ಯೋಜನೆಯನ್ವಯ ರೂ.60.00 ಕೋಟಿ ಅನುದಾನವಿದೆ.

5.4 ಯೋಜನಾ ಕಾರ್ಯಕ್ರಮಗಳು:-

ಅ) ಕೊಳವೆ ನೀರು ಸರಬರಾಜು ಯೋಜನೆ:- ಈ ವಿಭಾಗದ ಕಾಮಗಾರಿಗಳು 1991ರ ಜನಗಣತಿಯ ಪ್ರಕಾರ 20,000 ಕ್ಕೂ ಕಡಿಮೆ ಇರುವ ನಗರ ಪ್ರದೇಶಗಳಿಗೆ ಅನ್ವಯಿಸುವಂತಿದ್ದು ಅಂದಾಜು ವೆಚ್ಚದ ಶೇಕಡ 100 ರಷ್ಟು ಹಣವನ್ನು ಸರ್ಕಾರದ ವತಿಯಿಂದ ಭರಿಸಲಾಗುವುದು.

ಅ) ವಿಶೇಷ ಘಟಕ ಯೋಜನೆಯಡಿಯಲ್ಲಿ ನೀರು ಸರಬರಾಜು ಮತ್ತು ನೈರ್ಮಲ್ಯ ಕಾಮಗಾರಿಗಳು:-

ಈ ಯೋಜನೆಯಡಿಯಲ್ಲಿ ನೀರು ಸರಬರಾಜು ಮತ್ತು ಕಡಿಮೆ ವೆಚ್ಚದ ನೈರ್ಮಲ್ಯ ಕಾಮಗಾರಿಗಳನ್ನು ಪರಿಶಿಷ್ಟ ಜಾತಿಯ ಜನರಿಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ಆ ಜನಾಂಗದ ಕ್ಷೇತ್ರದಲ್ಲಿ ಈ ಯೋಜನೆಯನ್ನು ಕಾರ್ಯಾನುಷ್ಠಾನಗೊಳಿಸಲಾಗುವುದು. ಈ ಕಾಮಗಾರಿಗಳ ವೆಚ್ಚವನ್ನು ಸರ್ಕಾರದ ಸಹಾಯಧನದಿಂದ ವಿನಿಯೋಗಿಸಲಾಗುವುದು. ಈ ಯೋಜನೆಗಳು ಪ್ರಮುಖವಾಗಿ ಪರಿಶಿಷ್ಟ ಜಾತಿಯ ಜನಗಳಿಗೇ ಸೀಮಿತವಾಗಿರುವಂತಾಗಿದೆ.

ಇ) ನಗರ ನೀರು ಸರಬರಾಜು ಯೋಜನೆ:-

ಈ ವಿಭಾಗದ ಕಾಮಗಾರಿಗಳು 20,000 ಕ್ಕೂ ಹೆಚ್ಚು ಜನಸಂಖ್ಯೆ ಇರುವ ನಗರ ಪ್ರದೇಶಗಳಿಗೆ ಅನ್ವಯಿಸುತ್ತದೆ. ಈ ಯೋಜನೆಗಳ ಹಣದ ಒಂದು ಭಾಗವನ್ನು ಜೀವ ವಿಮಾ ನಿಗಮವು ಸ್ಥಳೀಯ ಸಂಸ್ಥೆಗಳಿಗೆ ಸಾಲದ ರೂಪದಲ್ಲಿ ಸೌಲಭ್ಯ ಕಲ್ಪಿಸಿ ಉಳಿದ ಭಾಗವನ್ನು ಸರ್ಕಾರವು ಸ್ಥಳೀಯ ಸಂಸ್ಥೆಗಳಿಗೆ ಸಾಲದ ಮಾಧ್ಯಮವಾಗಿ ಮಂಡಳಿಗೆ ರಾಜ್ಯ ವತಿಯಿಂದ ಆಯ ವ್ಯಯದಲ್ಲಿ ಅನುದಾನವನ್ನು ಅಳವಡಿಸಿ ಕಾರ್ಯಕ್ರಮ ಜಾರಿಗೊಳಿಸುವ ಅನುವನ್ನು ಮಾಡಿದೆ.

ಈ) ಮಂಡಳಿಯು ನೀರು ಸರಬರಾಜು ಯೋಜನೆಗಳು:—

ಈ ಯೋಜನೆಗಳನ್ನು ಮಂಡಲಿಯು ಸರ್ಕಾರದ ಆದೇಶದ ಮೇರೆಗೆ ಕಾರ್ಯಗತಗೊಳಿಸುತ್ತದೆ. ಈ ಯೋಜನೆಗಳು ಸರ್ಕಾರದಿಂದ ಹಾಗೂ ಜೀವವಿಮಾ ನಿಗಮದ ಸಾಲದ ಸಂಗ್ರಹಣದ ಮೇರೆಗೆ ತೆಗೆದುಕೊಳ್ಳಲಾಗುವುದು. ಮಂಡಲಿಯು ಸಾಲದ ಹಣವನ್ನು ಬಡ್ಡಿ ಸಮೇತ ಹಿಂತಿರುಗಿಸುವ ಜವಾಬ್ದಾರಿ ಹೊಂದಿದೆ. ಈ ಯೋಜನಾ ಕೆಲಸಗಳು ಪೂರ್ಣಗೊಂಡ ಮೇಲೆ ಮಂಡಲಿಯೇ ಅವುಗಳನ್ನು ನಿರ್ವಹಿಸುತ್ತದೆ. ನೀರಿನ ದರಗಳ ವಸೂಲಾತಿಯಿಂದ ಗಳಿಸಿದ ಹಣದಿಂದ ಈ ಯೋಜನೆಗಳ ನಿರ್ವಹಣೆ ಮತ್ತು ದುರಸ್ತಿ ಕೆಲಸಗಳ ವೆಚ್ಚ ಭರಿಸುವುದಲ್ಲದೇ ಯೋಜನೆಯ ಸಾಲವನ್ನು ಬಡ್ಡಿ ಸಹಿತ ಹಿಂದಿರುಗಿಸಲಾಗುತ್ತಿದೆ.

ಉ) ಒಳಚರಂಡಿ ಯೋಜನೆ:—

ಯಾವುದೇ ಒಂದು ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯುಳ್ಳ ನಗರ: ಪಟ್ಟಣಗಳಲ್ಲಿ ಈ ಭಾಗದ ಕೆಲಸವನ್ನು ತೆಗೆದುಕೊಳ್ಳಲಾಗುವುದು. ಪುರಸಭೆ ಮತ್ತು ನಗರಸಭೆ ವಂತಿಕೆ ಹಣದಿಂದ ಈ ಕೆಳಗೆ ನಮೂದಿಸಿರುವ ಆರ್ಥಿಕ ವ್ಯವಸ್ಥೆಗನುಗುಣವಾಗಿ ಕಾರ್ಯಕ್ರಮವನ್ನು ಜಾರಿಗೊಳಿಸಲಾಗುವುದು.

5.5 ಹಣದ ಸಂಪನ್ಮೂಲ:—

| | ಜೀವವಿಮಾ: ಹುಡ್ಕೋ ಸಾಲ | ಸರ್ಕಾರಿ ಸಾಲ | ನಗರ ಸಭೆಯ ಪಾಲು |
|---|---|---|---|
| ನಗರ ಪಾಲಿಕೆ | ಶೇಕಡ 50 | ಶೇಕಡ 20 | ಶೇಕಡ 30 |
| ನಗರ ಸಭೆ(50,000 ಕ್ಕೂ ಹೆಚ್ಚಿನ ಜನಸಂಖ್ಯೆ ಇರುವ ಪ್ರದೇಶ) | ಶೇಕಡ 50 | ಶೇಕಡ 25 | ಶೇಕಡ 25 |
| ಪುರಸಭೆ(20,000–50,000 ಜನ ಸಂಖ್ಯೆ ಇರುವ ಪ್ರದೇಶ) | ಶೇಕಡ 50 | ಶೇಕಡ 30 | ಶೇಕಡ 20 |

5.6 11.8.1994ರ ಹೊಸ ಆದೇಶದಂತೆ ಸಾಲದ ಪರಿಷ್ಕೃತ ಅನುಪಾತವು ಈ ರೀತಿ ಇರುತ್ತವೆ.

| | | | |
|---|---|---|---|
| ನಗರ ಪಾಲಿಕೆ | ಶೇಕಡ 70 | ಶೇಕಡ 5 | ಶೇಕಡ 25 |
| ಸಿಟಿ ಮುನಿಸಿಪಲ್ ಕೌನ್ಸಿಲ್ | ಶೇಕಡ 70 | ಶೇಕಡ15 | ಶೇಕಡ 15 |
| ಟೌನ್ ಮುನಿಸಿಪಲ್ ಕೌನ್ಸಿಲ್ | ಶೇಕಡ 70 | ಶೇಕಡ25 | ಶೇಕಡ 5 |

ಮಂಡಳಿಯು ಒಳಚರಂಡಿ ನಿರ್ಮಾಣವಾದ ನಂತರ ಸ್ಥಳೀಯ ಸಂಸ್ಥೆಗಳು ಅಸಲು ಮತ್ತು ಬಡ್ಡಿ ಸೇರಿದಂತೆ ಸಾಲದ ಮರು ಪಾವತಿ ಮಾಡಲು ಜವಾಬ್ದಾರಿಯುತವಾಗಿರುತ್ತದೆ.

ವ್ಯವಹಾರವನ್ನು ಅವರಿಗೆ ಬಿಟ್ಟು ಕೊಡುತ್ತದೆ. ಮಂಡಳಿಯು ಈ ವಿಚಾರದಲ್ಲಿ ಅಡ್ಡಿಬರುವುದಿಲ್ಲ, ಅವು ಯಾವುವೆಂದರೆ:—

1. ಚಾಮರಾಜನಗರ ಪಟ್ಟಣ 2. ಉಡುಪಿ ಪಟ್ಟಣ 3. ಚಿತ್ರದುರ್ಗ ನಗರ 4. ಚನ್ನರಾಯಪಟ್ಟಣ 5. ಹುಬ್ಬಳ್ಳಿ—ಧಾರವಾಡ ನಗರ (ಮಲಪ್ರಭಾ ಯೋಜನೆ) 6. ಬೀದರ ನಗರ 7. ಶೋರಾಪುರ ಪಟ್ಟಣ 8. ಮುದೋಳ ಪಟ್ಟಣ 9. ಅಫಜಲಪುರ ಪಟ್ಟಣ 10. ಮಂಡ್ಯ ನಗರ 11. ಪುತ್ತೂರು 12. ರೇಣುಕ ಎಲ್ಲಮ್ಮ ದೇವಸ್ಥಾನ.

ಈ) ಒಳ ಚರಂಡಿ ಯೋಜನೆ ಕೆಲಸಗಳು ಠೇವಣಿ ಕೊಡುಗೆ ಮೇರೆಗೆ ನಿರ್ವಹಣೆ ಒಳಪಡುವುವು ಯಾವುವೆಂದರೆ:—

1. ಹೊಸಪೇಟೆ 2. ಬಳ್ಳಾರಿ 3. ಉಡುಪಿ ಪಟ್ಟಣ.

ಈ ಮೇಲಿನ ಕೆಲಸಗಳಲ್ಲದೆ ಇನ್ನೂ 13 ನೀರು ಸರಬರಾಜು ವ್ಯವಸ್ಥೆಯು ಜವಾಬ್ದಾರಿಯನ್ನು ಮಂಡಳಿಯು ತಾಳಿದ್ದು, ಮಂಡಳಿಗೆ ಆ ಕಾರ್ಯನಿರ್ವಹಣೆಯಿಂದ ಯಾವ ತರಹದ ಆದಾಯವೂ ಇಲ್ಲದಂತಾಗಿದೆ ಅವುಗಳೆಂದರೆ:

1. ಕೆ.ಆರ್.ಪೇಟೆ 2. ಚಿಕ್ಕಮಗಳೂರು 3. ಬೇಲೂರು 4. ಶ್ರವಣಬೆಳಗೊಳ 5. ಬೈಂದೂರು 6. ಕುಂದಾಪುರ 7. ಚಿಕ್ಕೋಡಿ 8. ಹುಕ್ಕೇರಿ 8. ಯಾದಗೀರ 10. ಭಾಲ್ಕಿ 11. ಮುದ್ದೇಬಿಹಾಳ 12. ಷಹಾಬಾದ 13. ಚಿತ್ತಾಪುರ.

5.10 ಹೈದರಾಬಾದ್—ಕರ್ನಾಟಕ ಪ್ರದೇಶಗಳ ಅಭಿವೃದ್ಧಿ ಮಂಡಳಿಯ ಕಾರ್ಯಕ್ರಮ

ಈ ಕಾರ್ಯಕ್ರಮದಲ್ಲಿ 6 ಯೋಜನೆಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ಜುಲೈ 1990ರಲ್ಲಿ ಕೊಡಲಾಗಿದೆ. (ಇದರ ಪೈಕಿ 5 ಕಾಮಗಾರಿಗಳು ನೀರು ಸರಬರಾಜಿಗೆ ಸಂಬಂಧಿಸಿರುವುದು ಮತ್ತು 1 ಒಳ ಚರಂಡಿ ಯೋಜನೆಗೆ ಸಂಬಂಧಿಸಿರುವುದು) ಹಾಗೂ ಹೆಚ್.ಕೆ.ಡಿ.ಬಿ.ಯು 10 ನೀರು ಸರಬರಾಜು ಯೋಜನೆಗಳಿಗೆ ಮತ್ತು 1 ಒಳ ಚರಂಡಿ ಯೋಜನೆಗೆ ಮುಂದುವರಿದ ಕೆಲಸಗಳಿಗಾಗಿ ಹೆಚ್.ಕೆ.ಡಿ.ಬಿ. ಅನುದಾನದಲ್ಲಿ ಮಂಜೂರಾತಿ ನೀಡಿದೆ. ಈ ಕಾಮಗಾರಿಗಳು ಪ್ರಗತಿಯಲ್ಲಿವೆ. 1990—91ನೇ ಸಾಲಿನಲ್ಲಿ ರೂ:992 ಲಕ್ಷ ಹಂಚಿಕೆಗೆ ರೂ: 959.41 ಲಕ್ಷ ಖರ್ಚು ಮಾಡಲಾಗಿದೆ. 1991—92ನೇ ಸಾಲಿನಲ್ಲಿ 3:92ರ ಅಂತ್ಯಕ್ಕೆ ರೂ:600 ಲಕ್ಷ ಹಂಚಿಕೆಗೆ ರೂ:606.31 ಲಕ್ಷ ಖರ್ಚು ಮಾಡಲಾಗಿದೆ.

5.11 1992—93ನೇ ಸಾಲಿಗೆ ಹೆಚ್.ಕೆ.ಡಿ.ಬಿ.ಯಿಂದ ಹಂಚಿಕೆಯಾದ ಹಣ ರೂ:595 ಲಕ್ಷಗಳನ್ನು 3:93ರ ವರೆಗೆ ಖರ್ಚು ಮಾಡಲಾಗಿದೆ. 1993—94ನೇ ಸಾಲಿಗೆ ಈ ಮುಂದುವರಿದ ಕೆಲಸಗಳಿಗಾಗಿ ಹೆಚ್.ಕೆ.ಡಿ.ಬಿ. ಅನುದಾನದಲ್ಲಿ ರೂ:370.00 ಲಕ್ಷಗಳು ಹಂಚಿಕೆಯಾಗಿದ್ದು 12:93ರ ವರೆಗೆ ಹಣ ಬಿಡುಗಡೆಯಾಗಿರುವುದಿಲ್ಲ. ಗುಲ್ಬರ್ಗಾ ಮತ್ತು ಬಳ್ಳಾರಿ ನೀರು ಸರಬರಾಜು ಯೋಜನೆಗಳನ್ನು 3:94ರಲ್ಲಿ ಚಾಲ್ತಿ ಮಾಡಲಾಗಿದೆ.

5.12 ಅಭಾವ ಪೀಡಿತ ಪ್ರದೇಶಗಳಲ್ಲಿ ನೀರು ಸರಬರಾಜು ಕೊಡುವುದು:—

ಮಂಡಳಿಯು ಸರ್ಕಾರದ ಪ್ರೇರಣೆಯ ಮೇರೆಗೆ ಅಭಾವ ಪೀಡಿತ ಪ್ರದೇಶಗಳಲ್ಲಿ ನೀರು ಸರಬರಾಜು ಕೆಲಸವನ್ನು ನಿರ್ವಹಿಸುತ್ತದೆ.

5.13 **ಠೇವಣಿ ಕೆಲಸಗಳ ಕಾರ್ಯಕ್ರಮಗಳು:-**

ಮುನಿಸಿಪಾಲಿಟಿ, ಕರ್ನಾಟಕ ಗೃಹ ಮಂಡಳಿ, ಕರ್ನಾಟಕ ಪವರ್ ಕಾರ್ಪೊರೇಷನ್ ಹಾಗೂ ನಗರಾಭಿವೃದ್ಧಿ ಪ್ರಾಧಿಕಾರಗಳ ವತಿಯಿಂದ ಮಂಡಳಿಯು ನೀರು ಸರಬರಾಜು ಮತ್ತು ಒಳಚರಂಡಿ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತದೆ. ಅಂತಹ ಕಾರ್ಯಕ್ರಮಗಳ ಖರ್ಚನ್ನು ಆಯಾಯಾ ಸಂಸ್ಥೆಗಳೇ ಭರಿಸುತ್ತವೆ.

5.14 1994-95ರ ಸಾಲಿಗೆ ಸರ್ಕಾರವು 41 ಹೊಸ ಕಾಮಗಾರಿಗಳಿಗೆ ಭಾಗಾತ್ಮಕವಾಗಿ ಅನುಮತಿಯನ್ನು ದೊರಕಿಸಿ ಕೊಟ್ಟಿದ್ದು, ನಗರ/ಪುರಸಭೆ ಪಾಲಿಕೆಯಿಂದ $\frac{1}{3}$ ರ ಪಾಲು ಹಣ ನೀಡಿದ್ದು ಸಾಲ ಮಂಜೂರಾತಿಯಾದ ಕೂಡಲೇ ಸರ್ಕಾರದ ಸೂಕ್ತ ಆಡಳಿತಾತ್ಮಕ ಮಂಜೂರಾತಿಯಾದ ಮೇಲೆ ಕಾಮಗಾರಿಯನ್ನು ಪ್ರಾರಂಭಗೊಳಿಸಲಾಗುವುದು. ಈ 41 ಕಾಮಗಾರಿಗಳ ಒಟ್ಟು ಅಂದಾಜು ವೆಚ್ಚ ರೂ.136.56 ಕೋಟಿ ಕಾಮಗಾರಿಗಳ ವಿವರ ಈ ರೀತಿ ಇದೆ.

5.15 **ಮಂಡಳಿಯು 1994-95ರ ಸಾಲಿನ ಬೇಡಿಕೆ ವಸೂಲಾತಿಯ ವಿವರ:-**

(ರೂ. ಲಕ್ಷಗಳಲ್ಲಿ)

| | ಬೇಡಿಕೆ | ವಸೂಲಾತಿ | ಬಾಕಿ |
|---|---|---|---|
| ಕನ್ಸ್ಯೂಮರ್ ಫಂಡ್ | 1217.30 | 48.25 | 1169.05 |
| ಬಲ್ಕ್ ಸಪ್ಲೈ | 3568.29 | 72.20 | 3496.08 |

5.16 **ಆರ್ಥಿಕ ಪ್ರಗತಿಯ ವಿವರ:-**

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಸ್ಕೀಮಿನ ವಿವರ | 1993-94ರ ಅನುದಾನ | | 1994-95ರ (ಡಿಸೆಂಬರ್ 94) ಅನುದಾನ | |
|---|---|---|---|---|---|
| | | ಗುರಿ | ಸಾಧನೆ | ಗುರಿ | ಸಾಧನೆ |
| 1. | ಅ) ಕೊಳವೆ ನೀರು ಸರಬರಾಜು | 700 | 806.42 | 900 | 457.28 |
| | ಆ) ವಿಶೇಷ ತ್ವರಿತ ಯೋಜನೆ | 1200 | 1018.33 | 1407 | 181.72 |
| 2. | ನಗರ ನೀರು ಸರಬರಾಜು ಯೋಜನೆ. | 3020 | 3313.58 | 3303 | 2684.67 |
| 3. | ಹೋಬಳಿ ನೀರು ಸರಬರಾಜು. | 780 | 620.82 | 400 | 210.13 |
| 4. | ಒಳಚರಂಡಿ ಯೋಜನೆ | 300 | 265.[illegible] | 400 | [illegible] |
| | ಒಟ್ಟು | 6000 | 6024.21 | 6410 | [illegible] |

| ಕ್ರಮ ಸಂಖ್ಯೆ | ವಿಭಾಗ ವಿವರ | 1993-94 ಒಟ್ಟು ಕಾಮಗಾರಿ | ಕಮಿಷನ್ ಮಾಡಲು ನಿರ್ಧರಿಸಿದ ಗುರಿ | ಸಾಧನೆ | ಮುಂದಿನ ವರ್ಷ ಕಾರ್ಯಕ್ರಮ | 1994-95 ಒಟ್ಟು ಕಾಮಗಾರಿ • | ಕಮಿಷನ್ ಮಾಡಲು ನಿರ್ಧರಿಸಿದ ಗುರಿ | ಸಾಧನೆ | ಮುಂದಿನ ವರ್ಷ ಕಾರ್ಯಕ್ರಮ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಕೊಳವೆ ನೀರು ಸರಬರಾಜು ಯೋಜನೆ | 26 | 6 | 5 | 31 | 49 | 4 | — | 49 |
| 2 | ನಗರ ನೀರು ಸರಬರಾಜು ಯೋಜನೆ | 76 | 8 | 5 | 71 | 80 | 23 | 3 | 77 |
| 3 | ಮಂಡಳಿ ನೀರು ಸರಬರಾಜು ಯೋಜನೆ | 3 | — | — | 3 | 5 | — | — | 5 |
| 4 | ಒಳ ಚರಂಡಿ ಯೋಜನೆ | 13 | 2 | — | 13 | 21 | 4 | 2 | 19 |
| | ಒಟ್ಟು | 119 | 16 | 10 | 108 | 155 | 31 | 5 | 150 |

• ಹಿಂದಿನ ಬಾಕಿ ಕಾಮಗಾರಿಗಳನ್ನು ಗಣನೆಗೆ ತೆಗೆದುಕೊಂಡಿರುತ್ತದೆ.

1994-95ರ ಸಾಲಿಗೆ ಮಂಡಳಿಯು ನಿರ್ಧರಿಸಿದ 31 ಕಾಮಗಾರಿಗಳ ಪೈಕಿ 5ನ್ನು ಸಾಧಿಸಿದೆ. ಕಳೆದ ಸಾಲಿನಲ್ಲಿ ಮಂಡಳಿಯು 16 ಕಾಮಗಾರಿಗಳ ಪೈಕಿ 10ರ ಸಾಧನೆಯನ್ನು ಗಳಿಸಿತ್ತು.

## ಭಾಗ-3

### ನಗರಾಭಿವೃದ್ಧಿ

1991ರ ಜನಗಣತಿ ಪ್ರಕಾರ ಕರ್ನಾಟಕದ ಜನಸಂಖ್ಯೆ:44.82 ಮಿಲಿಯನ್ ಇದ್ದು, ಇದರ ಶೇಕಡ 30.9ರಷ್ಟು ಜನಸಂಖ್ಯೆ ನಗರ:ಪಟ್ಟಣ ಪ್ರದೇಶಗಳಲ್ಲಿರುತ್ತಾರೆ. 1981ರ ಜನಗಣತಿಗೆ ಹೋಲಿಸಿದಾಗ ಕರ್ನಾಟಕ ನಗರ ವಾಸಿಗಳು ಶೇಕಡ 28.89 ಇದ್ದು ರಾಷ್ಟ್ರ ಮಟ್ಟಕ್ಕಿಂತ (25.72) ಉತ್ತಮ ಸ್ಥಿತಿಯಲ್ಲಿರುತ್ತದೆ.

ಕಳೆದ 2 ದಶಕಗಳಿಂದ ಪಟ್ಟಣಗಳ ಸಂಖ್ಯೆ 245 ರಿಂದ 306ಕ್ಕೆ ಏರಿದ್ದು ಶೇಕಡ 25ರ ಪ್ರಗತಿಯನ್ನು ತೋರಿಸುತ್ತದೆ. ಅಂತೆಯೇ ನಗರ ಪ್ರದೇಶಗಳ ಸಮೂಹವು ಕೂಡ. 1971ರಲ್ಲಿ 12 ಪಟ್ಟಣಗಳಿದ್ದು 1991ರ ಜನಗಣತಿ ಪ್ರಕಾರ 22 ನಗರಗಳಿಗೆ ಏರಿದೆ.

### 6. ಪೌರಾಡಳಿತ ಇಲಾಖೆ

6.1 ಪೌರಾಡಳಿತ ಇಲಾಖೆಯು 1984ರಲ್ಲಿ ಅಸ್ತಿತ್ವಕ್ಕೆ ಬಂದು ಪುರಸಭೆ ಹಾಗೂ ನಗರ ಸಭೆಗಳ ಆಡಳಿತವನ್ನು ದಕ್ಷತೆಯಿಂದ ನಿರ್ವಹಿಸಿಕೊಂಡು ಹೋಗಲು ಹಾಗೂ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಅಭಿವೃದ್ಧಿ ಕಾರ್ಯಕ್ರಮಗಳ ಕ್ರಿಯಾತ್ಮಕ ಯೋಜನೆಯನ್ನು ತಯಾರಿಸಿ ನಿರ್ವಹಿಸಿಕೊಂಡು ಹೋಗಲು ನೋಡಲ್ ಏಜನ್ಸಿ ಎಂದು ಪರಿಗಣಿಸಲಾಗಿದೆ.

6.2 ನಿರ್ದೇಶನಾಲಯವು ಭಾರತೀಯ ಆಡಳಿತ ಸೇವೆಯನ್ನು ಹೊಂದಿರುವ ನಿರ್ದೇಶಕರನ್ನು ಸೇರಿದಂತೆ ಜಂಟಿ ನಿರ್ದೇಶಕರು ಮತ್ತು ಕೆ.ಎ.ಎಸ್.ನ ಇಬ್ಬರು ಅಧಿಕಾರಿಗಳನ್ನೊಳಗೊಂಡಂತೆ ಇಲಾಖೆಯಲ್ಲಿನ ಕಾರ್ಯ ಚಟುವಟಿಕೆ ನಡೆಸಿಕೊಂಡು ಬರುತ್ತಿದೆ. ಪೌರಾಡಳಿತ ಇಲಾಖೆಯು ಸಿಬ್ಬಂದಿ ವರ್ಗದ ಒಟ್ಟು ಸಂಖ್ಯೆಯು 98 ಅಧಿಕಾರಿಗಳಿಂದ ಕೂಡಿರುತ್ತದೆ.

6.3 1991ರ ಜನಗಣತಿಗೆ ಅನುಗುಣವಾಗಿ ನಗರ ಸಭೆಯ ವಾರು ಹಾಗೂ ಅವುಗಳ ಜನಸಂಖ್ಯೆಯು ಈ ರೀತಿ ಇರುತ್ತದೆ.

| ಕ್ರಮ ಸಂಖ್ಯೆ | ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳ ವರ್ಗೀಕರಣ | ಸಂಖ್ಯೆ: | ಜನಸಂಖ್ಯೆ | ಶೇಕಡಾವಾರು |
|---|---|---|---|---|
| 1) | ನಗರ ಸಭೆಗಳು | 19 | 22,00,031 | 36 |
| 2) | ಪುರಸಭೆಗಳು | 135 | 36,12,667 | 59 |
| 3) | ಅಧಿಸೂಚಿತ ಪ್ರದೇಶ | 12 | 1,34,050 | 2 |
| 4) | ಸ್ಯಾನಿಟರಿ ಬೋರ್ಡ್ | 2 | 1,53,738 | 03 |
| | ಒಟ್ಟು | 168 | 61,00,486 | 100 |

6.4 ಜನಸಂಖ್ಯೆ ಆಧಾರದ ಮೇಲೆ ನಗರ ಸಭೆ/ಪುರ ಸಭೆಗಳನ್ನು ಈ ಕೆಳಕಂಡಂತೆ ವಿಭಾಗಿಸಲಾಗಿದೆ.

| ಕ್ರಮ ಸಂಖ್ಯೆ | ನಗರ ಸಭೆಯ ವರ್ಗ | ಪದನಾಮ | ನೇಮಕ ಮಾಡ ಬೇಕಾದ ಸಿಬ್ಬಂದಿಯ ಸಂಖ್ಯೆ |
|---|---|---|---|
| 1. | ಮುನಿಸಿಪಲ ಕೌನ್ಸಿಲ 1.5 ಲಕ್ಷಕ್ಕಿಂತ ಹೆಚ್ಚಿನ ಜನಸಂಖ್ಯೆ ಒಳಗೊಂಡಂತೆ ಅಥವಾ 2.00 ಕೋಟಿ ಆದಕ್ಕಿಂತ ಹೆಚ್ಚಿನ ವರಮಾನ. | ಮುನಿಸಿಪಲ ಕಮೀಷನರ ಗ್ರೇಡ-1 | 1 |
| 2. | ಮುನಿಸಿಪಲ ಕೌನ್ಸಿಲ 50,000ದಿಂದ 1.5 ಲಕ್ಷ ಜನಸಂಖ್ಯೆ ಒಳಗೊಂಡಂತೆ. | ಮುನಿಸಿಪಲ ಕಮೀಷನರ ಗ್ರೇಡ-2 | 1 |
| 3. | ಟೌನ ಮುನಿಸಿಪಲ ಕೌನ್ಸಿಲ 25,000 ದಿಂದ 50,000 ಜನಸಂಖ್ಯೆಯನ್ನು ಒಳಗೊಂಡಂತೆ. | ಚೀಫ ಆಫೀಸರ ಗ್ರೇಡ-1 | 1 |
| 4. | ಟೌನ ಮುನಿಸಿಪಲ ಕೌನ್ಸಿಲ. 10,000ದಿಂದ 25,000 ಜನಸಂಖ್ಯೆ. | ಚೀಫ ಆಫೀಸರ ಗ್ರೇಡ-2 | 1 |
| 5. | 10,000 ಒಳಗಿನ ಅಧಿಸೂಚಿತ ಪ್ರದೇಶದ ಜನಸಂಖ್ಯೆ. | ಚೀಫ ಆಫೀಸರ ಗ್ರೇಡ-2 | 1 |

6.5 ಇಲಾಖೆಯ ಕಾರ್ಯ ಚಟುವಟಿಕೆಗಳು:- ಇಲಾಖೆಯ ಕಾರ್ಯ ಚಟುವಟಿಕೆಗಳನ್ನು ಪ್ರಮುಖವಾಗಿ 2 ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳಲ್ಲಿ (1) ಕಡ್ಡಾಯವಾಗಿ ಮಾಡಲೇ ಬೇಕಾದ ಕಾರ್ಯಕ್ರಮಗಳು ಅವು ಯಾವುವೆಂದರೆ, ರಸ್ತೆಗಳ ನಿರ್ವಹಣೆ, ಬೀದಿ ದೀಪಗಳ ವ್ಯವಸ್ಥೆ, ನೈರ್ಮಲ್ಯ ಹಾಗೂ ಶುದ್ಧೀಕರಣ, ನೀರು ಪೂರೈಕೆ, ಜನನ ಮರಣಗಳ ನೋಂದಣಿ ವ್ಯವಸ್ಥೆ, ಸಾರ್ವಜನಿಕ ಚುಚ್ಚುಮದ್ದು ವ್ಯವಸ್ಥೆ ಇತ್ಯಾದಿ.

(2) ಕಡ್ಡಾಯೇತರ ಕೆಲಸಗಳೆಂದರೆ, ಬಡಾವಣೆಗಳ ನಿರ್ಮಾಣ, ಪುಸ್ತಕ ಭಂಡಾರ, ವಸ್ತು ಸಂಗ್ರಹಾಲಯ, ಆಸ್ಪತ್ರೆಗಳ ನಿರ್ಮಾಣ ಹಾಗೂ ನಿರ್ವಹಣೆ ಇತ್ಯಾದಿ.

6.6 <u>ಯೋಜನಾ ಕಾರ್ಯಕ್ರಮಗಳು</u>:- ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳಿಂದ ರೂಪಿತಗೊಂಡ ಅಭಿವೃದ್ಧಿ ಯೋಜನೆಗಳನ್ನು ಪುರಸಭೆಗಳು ಅನುಷ್ಠಾನಗೊಳಿಸುವುದು, ಅವುಗಳಲ್ಲಿ ಕೆಲವು ಕಾರ್ಯಕ್ರಮಗಳನ್ನು ಸ್ಥಳೀಯ ಸಂಸ್ಥೆಗಳ ಮುಖೇನ ಕಾರ್ಯಗತಗೊಳಿಸುವ ಹೊಣೆಯು ಸಹ ಈ ಇಲಾಖೆಯದ್ದಾಗಿರುತ್ತದೆ. ಪ್ರಸ್ತುತ ಸಾಲಿನಲ್ಲಿ ಕೈಗೊಂಡಿರುವ ಯೋಜನೆಗಳೆಂದರೆ ನೆಹರು ರೋಜಗಾರ್ ಯೋಜನೆ, ನಗರಗಳ ಮೂಲಭೂತ ಅಗತ್ಯ ಸೇವೆ ಹಾಗೂ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿ ಯೋಜನೆ ಇದಲ್ಲದೆ ಕಡಿಮೆ ವೆಚ್ಚದ ನೈರ್ಮಲೀಕರಣ ಯೋಜನೆ ಇವುಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಮುಂದಿನ ಕಂಡಿಕೆಗಳಲ್ಲಿ ವಿವರಿಸಲಾಗಿದೆ.

6.7 <u>ನೆಹರು ರೋಜಗಾರ್ ಯೋಜನೆ</u>

1) ನಗರ ಕಿರು ಉದ್ದಿಮೆ(ಅರ್ಬನ್ ಮೈಕ್ರೋ ಎಂಟರ್‌ಪ್ರೈಸ್)
2) ನಗರ ಕೂಲಿ ಉದ್ಯೋಗ(ಅರ್ಬನ್ ವೇಜ್ ಎಂಪ್ಲಾಯ್‌ಮೆಂಟ್)
3) ವಸತಿ ಸೌಕರ್ಯ(ಹೌಸಿಂಗ್ ಅಂಡ್ ಶೆಲ್ಟರ್ ಅಪ್‌ಗ್ರೇಡೇಷನ್)

ಅ) <u>ನಗರ ಕಿರು ಉದ್ದಿಮೆ (ಅರ್ಬನ್ ಮೈಕ್ರೋ ಎಂಟರ್‌ಪ್ರೈಸ್)</u>:

ಇದು ನಗರ ಬಡವರಿಗೆ ಉದ್ಯೋಗ ಅವಕಾಶ ಕಲ್ಪಿಸಿಕೊಡುವ ಕಾರ್ಯಕ್ರಮವಾಗಿರುತ್ತದೆ. ಸಾಲ ಹಾಗೂ ಸಹಾಯಧನ ರೂಪದ ಶೇಕಡ 75:25ರ ಅನುಪಾತದಲ್ಲಿರುತ್ತದೆ. ಸಹಾಯಧನವನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಸಮಪಾಲಿನಲ್ಲಿ ಭರಿಸುವಂತಿರುತ್ತದೆ. ಈ ಯೋಜನೆಯಲ್ಲಿ ಪ್ರತಿಯೊಬ್ಬ ಫಲಾನುಭವಿಗಳಿಗೆ ಗರಿಷ್ಠ ರೂ:4000 ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಮತ್ತು ಮಹಿಳೆಯರಿಗೆ ಗರಿಷ್ಠ 5,000 ರೂ: ಪರಿಮಿತಿಯಲ್ಲಿ ಕಾರ್ಯಕ್ರಮವನ್ನು ಜಾರಿಗೊಳಿಸಲಾಗಿದೆ.

ಆ) <u>ನಗರ ಕೂಲಿ ಉದ್ಯೋಗ (ಅರ್ಬನ್ ವೇಜ್ ಎಂಪ್ಲಾಯ್‌ಮೆಂಟ್)</u>

ಇದು ನಗರ ಬಡವರಿಗೆ ಕೂಲಿ ರೂಪದ ಮೇಲೆ ವ್ಯವಸ್ಥೆಗೊಳಿಸಲಾಗಿರುವ ಕಾರ್ಯಕ್ರಮವಾಗಿರುತ್ತದೆ. ನಗರ ಹಾಗೂ ಸ್ಥಳೀಯ [illegible] ಉದ್ಯೋಗ ಅವಕಾಶ ಕಲ್ಪಿಸಿಕೊಡುವಲ್ಲಿ, ಸಮುದಾಯ [illegible] ಒದಗಿಸುವಲ್ಲಿನ ವೆಚ್ಚವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 80:20ರ ಅನುಪಾತದಲ್ಲಿ ಹಂಚಿಕೊಳ್ಳಬಹುದಾಗಿದೆ.

ಇ) <u>ವಸತಿ ಸೌಕರ್ಯ (ಹೌಸಿಂಗ್ ಅಂಡ್ ಶೆಲ್ಟರ್ ಅಪ್‌ಗ್ರೇಡೇಷನ್)</u>:

ಈ ಯೋಜನೆಯನ್ನು ಹುಡ್ಕೋ ನೆರವಿನಿಂದ ಸಾಲ ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸಹಾಯಧನದಿಂದ ನಡೆಸಲಾಗುವುದು. [illegible] ವಸತಿ ಸೌಲಭ್ಯವನ್ನು ಮೇಲ್ದರ್ಜೆಗೇರಿಸುವ ಈ ಕಾರ್ಯಕ್ರಮವು ರಾಜ್ಯದ 1 ರಿಂದ 20 ಲಕ್ಷ ಜನಸಂಖ್ಯೆಯುಳ್ಳ 18 ಪಟ್ಟಣಗಳಲ್ಲಿ ಕಾರ್ಯಕ್ರಮ ಜಾರಿಯಲ್ಲಿರುತ್ತದೆ. ಇದರಲ್ಲಿ ರೂ:3000 ಸಾಲ ಹಾಗೂ ರೂ:1000 ಸಹಾಯಧನ ದೊರೆಯುತ್ತದೆ. ಪ್ರಸ್ತುತ ಸಾಲಿನಲ್ಲಿ ರೂ:145 ಲಕ್ಷ ಖರ್ಚಾಗಿರುತ್ತದೆ. [illegible] ಈ ಯೋಜನೆಯ ಕಾರ್ಯಕ್ರಮದ ಪರಿವೀಕ್ಷಣೆಯನ್ನು [illegible].

## 6.8 ಸಣ್ಣ ಮತ್ತು ಮಧ್ಯಮ ವರ್ಗದ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆ (ಐ.ಡಿ.ಎಸ್.ಎಂ.ಟಿ):

ಅ) ಸಣ್ಣ ಮತ್ತು ಮಧ್ಯಮ ವರ್ಗದ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆಯು 1979ರಲ್ಲಿ ಪ್ರಾರಂಭವಾದ ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿರುತ್ತದೆ.

ಆ) ಬೆಳೆಯುತ್ತಿರುವ ನಗರ ಸಂಖ್ಯೆಯ ಪ್ರಮಾಣವನ್ನು ಗಮನಿಸಿದಾಗ ಗ್ರಾಮದ ಜನರು ಪಟ್ಟಣಗಳಿಗೆ ವಲಸೆ ಹೋಗುವುದನ್ನು ತಡೆಹಿಡಿಯುವ ಸಲುವಾಗಿ ಹಾಗೂ ಪಟ್ಟಣಾಭಿವೃದ್ಧಿಯು ಸಾರ್ಥವಾಗಿರುವಂತೆ ಹಾಗೂ ದಿನಾಂತ ನಿರುದ್ಯೋಗಿಗಳಿಗೆ ಸ್ವಂತ ಉದ್ಯೋಗ ಕಲ್ಪಿಸುವ ಅವಕಾಶವನ್ನು ಧ್ಯೇಯವಾಗಿ ಹೊಂದಿರುವುದರಿಂದ ಈ ಯೋಜನೆಯು ಅನುಷ್ಠಾನ ಮಾಡಲಾಗಿದೆ. ಈ ಯೋಜನೆಯು ಸಹ ಸರ್ಕಾರದ ವತಿಯಿಂದ ಸಾಲ ಮತ್ತು ಸಹಾಯ ಧನದ ರೂಪದಲ್ಲಿ ಅನುಷ್ಠಾನಗೊಳ್ಳಲಿದೆ.

ಇ) ಈ ಯೋಜನೆಯ ಮುಖ್ಯ ಉದ್ದೇಶವೇನೆಂದರೆ ಬೆಳೆಯುತ್ತಿರುವ ಸಣ್ಣ ಮತ್ತು ಮಧ್ಯಮ ವರ್ಗದ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆಗಳ ಪ್ರದೇಶಗಳನ್ನು ಅಭಿವೃದ್ಧಿ ಕೇಂದ್ರವನ್ನಾಗಿ ಮಾಡುವುದು ಹಾಗೂ ಕಾರ್ಯಚಟುವಟಿಕೆಯನ್ನು [illegible]ಗೊಳಿಸುವುದು. ಇವುಗಳಿಂದ ನಗರ ಪ್ರದೇಶಗಳಿಗೆ ವರ್ಗಾವಣೆಯಾಗುವುದನ್ನು ತಡೆಗಟ್ಟುವುದು. ಈ ದಿಶೆಯಲ್ಲಿ ಭಾರತ ಸರ್ಕಾರದ ಹೊಸ ಮಾರ್ಗ ಸೂಚಿ ಪ್ರಕಾರ ನಗರ ಪ್ರದೇಶಗಳನ್ನು 4 ಗುಂಪುಗಳಾಗಿ ವಿಂಗಡಿಸಲಾಗಿದೆ ಅವುಗಳೆಂದರೆ:

ಎ ಗುಂಪು – 20,000 ಜನಸಂಖ್ಯೆಗಿಂತ ಕಡಿಮೆ
ಬಿ ಗುಂಪು – 20,000 ರಿಂದ 50,000 ರವರೆಗೆ
ಸಿ ಗುಂಪು – 50,001 ರಿಂದ 1 ಲಕ್ಷ
ಡಿ ಗುಂಪು – 1 ಲಕ್ಷದಿಂದ 3 ಲಕ್ಷದವರೆಗೆ

ಈ) ಕೇಂದ್ರ ಹಾಗೂ ರಾಜ್ಯ ಸರ್ಕಾರದ ವತಿಯಿಂದ 60:40ರ ಅನುಪಾತದಲ್ಲಿ ಗರಿಷ್ಠ ಮಿತಿಯಲ್ಲಿ ದೊರೆಯುತ್ತಿರುವ ಪಾಲು.

| ಶ್ರೇಣಿ | ಕೇಂದ್ರ | ರಾಜ್ಯ | ಇನ್ಸ್ಟಿಟ್ಯೂಷನಲ್ ಫೈನಾನ್ಸ್ (ಹುಡ್ಕೊ) |
|---|---|---|---|
| ಎ | 36 | 24 | 40 |
| ಬಿ | 72 | 48 | 80 |
| ಸಿ | 120 | 80 | 300 |
| ಡಿ | 180 | 120 | 70 |

ಉ) ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಸಮಗ್ರ ಅಭಿವೃದ್ಧಿ ಯೋಜನೆಯಡಿಯಲ್ಲಿ ನಡೆಸಲಾಗುವ ವಿವಿಧ ಕಾರ್ಯಕ್ರಮಗಳು:-

1) ಭೂ ಸ್ವಾಧೀನ ಮತ್ತು ಅದರ ಅಭಿವೃದ್ಧಿ
2) ಟ್ರಾಫಿಕ್ ಮತ್ತು ಸಾರಿಗೆ ಸಂಪರ್ಕ
3) ಅಂಗಡಿ ಮಳಿಗೆಗಳು
4) ಕೈಗಾರಿಕಾ ಮಳಿಗೆಗಳು
5) ಸುಲಭ ಶೌಚಾಲಯಗಳು

ಅನುಷ್ಠಾನಗೊಳಿಸುವ ಏಜೆನ್ಸಿ:

ನಗರ ಸಭೆಗಳು:ಪುರಸಭೆಗಳು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿ, ಭೂ ಸೇನಾ ನಿಗಮ, ಕರ್ನಾಟಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ನಿರ್ಮಾಣ ನಿಗಮ,

ಊ) 1993ರ ಡಿಸೆಂಬರ ಅಂತ್ಯದವರೆಗಿನ ಪ್ರಗತಿ:

ಡಿಸೆಂಬರ 1993ರ ಅಂತ್ಯದವರೆಗೆ ಶೇಕಡ 62ರಷ್ಟು ಹಣ ವಿನಿಯೋಗ ಮಾಡಿ ಆರ್ಥಿಕ ಪ್ರಗತಿಯನ್ನು ಸಾಧಿಸಿದೆ. ಭೂ ಸ್ವಾಧೀನದಡಿಯಲ್ಲಿ ಶೇಕಡ 59ರ ಪ್ರಗತಿ ಸಾಧಿಸಿದ್ದು, ಸಾರಿಗೆ ಮತ್ತು ಸಂಪರ್ಕ ಕಾರ್ಯಕ್ರಮದಡಿಯಲ್ಲಿ ಶೇಕಡ 120 ರಷ್ಟು ಸಾಧನೆಯನ್ನು ಗಳಿಸಿದೆ. ಇದಲ್ಲದೆ 54 ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿದೆ.

6.9) ನಗರ ಮೂಲ ಸೇವಾ ಯೋಜನೆ (ಅರ್ಬನ್ ಬೇಸಿಕ ಸರ್ವೀಸಸ್ ಪ್ರೋಗ್ರಾಂ):

ಈ ಯೋಜನೆಯಲ್ಲಿ ಬಡತನ ನಿರ್ಮೂಲನಾ ಮುಖ್ಯ ಉದ್ದೇಶದಿಂದ ಕೇಂದ್ರ ಸರ್ಕಾರವು 1990-91ರಲ್ಲಿ ಪ್ರಾರಂಭಿಸಿತು. ಈ ಯೋಜನೆಯ ವಿವಿಧ ಉದ್ದೇಶಗಳೆಂದರೆ, ಸಾಮುದಾಯಿಕ ವಿದ್ಯಾಭ್ಯಾಸ ಆರೋಗ್ಯ ಪೌಷ್ಠಿಕಾಂಶ ಹಾಗೂ ಅದಕ್ಕೆ ಸಂಬಂಧಪಟ್ಟ ತರಬೇತಿ ಕಾರ್ಯಕ್ರಮವನ್ನು ಹಮ್ಮಿಕೊಂಡು ಬಡವರಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟು ಅವರ ಜೀವನ ಮಟ್ಟವನ್ನು ಬಡತನ ರೇಖೆಯಿಂದ ಏರಿಸುವುದು. ವಿಶೇಷವಾಗಿ ಮಹಿಳೆಯರ ಅಭ್ಯುದಯಕ್ಕೆ ಹಾಗೂ ಮಕ್ಕಳ ಕಲ್ಯಾಣ ಕುರಿತು ಈ ಯೋಜನೆಯನ್ವಯ ಮೇಲೆ ತಿಳಿಸಿರುವ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಪ್ರಥಮ ವರ್ಷದಲ್ಲಿ ಭಾರತ ಸರ್ಕಾರವು ಶೇಕಡ 100 ರಷ್ಟು ಸಹಾಯಧನ ಹೊಂದಿದೆ. ಕಾರ್ಯಕ್ರಮವನ್ನು ಪ್ರಾರಂಭಿಸಿದ 2ನೇ ವರ್ಷದಿಂದ ಯೋಜನೆಗೆ ಬೇಕಾದ ಹಣವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇಕಡ 50ರ ಪ್ರಮಾಣದಲ್ಲಿ ಪಾಲು ಮಾಡಿಕೊಳ್ಳುವುದಾಗಿದೆ. ಹಾಲಿ ವರ್ಷದಲ್ಲಿ 23 ಪಟ್ಟಣಗಳು ಈ ಕಾರ್ಯಕ್ರಮದಲ್ಲಿ ತೊಡಗಿರುತ್ತದೆ. ಇದಲ್ಲದೆ ಚಿತ್ರದುರ್ಗ, ಹುಬ್ಬಳ್ಳಿ, ಮೈಸೂರು ಮತ್ತು ಗುಲ್ಬರ್ಗಾ ನಗರ ಪ್ರದೇಶಗಳು ಯುನಿಸೆಫ್ ವತಿಯಿಂದ (ಡೆಮಾನ್ಸ್ಟ್ರೇಷನ್) ಪಟ್ಟಣಗಳೂ ಸಹ ಸೇರಿರುತ್ತವೆ.

ಇದಲ್ಲದೆ ಈ ಹಿಂದೆ ಬಾಕಿ ಇರುವ 843 ಭಾಗ್ಯಮಂದಿರ ಮನೆಗಳನ್ನು ಸಹ ಪೌರಾಡಳಿತ ಇಲಾಖೆಯು ನಡೆಸಿಕೊಂಡು ಹೋಗುತ್ತಿದೆ.

6.10 ಸಮಗ್ರ ಕಾರ್ಯಕ್ರಮದಡಿ ಕಡಿಮೆ ವೆಚ್ಚದ ಶೌಚಾಲಯಗಳ ನಿರ್ಮಾಣ:

ಈ ಯೋಜನೆ ಯು 1989-90ರಲ್ಲಿ ಕೇಂದ್ರ ಸರ್ಕಾರದಿಂದ ಪರಿಚಯಿಸಲ್ಪಟ್ಟಿತು. ಈ ಯೋಜನೆಯ ಮುಖ್ಯ ಉದ್ದೇಶವೆಂದರೆ ಮಲ ಹೊರುವಿಕೆಯ ಪದ್ಧತಿಯನ್ನು ನಿರ್ಮೂಲ ಮಾಡುವುದು. ಇದು ಎರಡು ಘಟಕಗಳನ್ನು ಒಳಗೊಂಡಿರುತ್ತದೆ.

1) ಘಟಕ ಒಂದಕ್ಕೆ ರೂ 2240.00 ಗಳ ವೆಚ್ಚದಲ್ಲಿ ಒಣ ಶೌಚಾಲಯಗಳಾಗಿ ಪರಿವರ್ತಿಸುವುದು.

2) ಘಟಕ ಒಂದಕ್ಕೆ ರೂ:4485.00 ಗಳ ವೆಚ್ಚದಲ್ಲಿ ಹೊಸ ಶೌಚಾಲಯಗಳನ್ನು ನಿರ್ಮಿಸುವುದು.

ಹುಡ್ಕೋ ಸಂಸ್ಥೆಯಿಂದ ರೂ 2,365.68 ಲಕ್ಷ ಸಾಲ ಹಾಗೂ ಕೇಂದ್ರ ಸರ್ಕಾರದಿಂದ ರೂ 741.34 ಲಕ್ಷ ಸಹಾಯ ಧನ ದೊರೆತಿದೆ.

ಈ ಯೋಜನೆಯು ಪೌರಾಡಳಿತ ನಿರ್ದೇಶನಾಲಯದ ಮೂಲಕ 52 ಪಟ್ಟಣಗಳಲ್ಲಿ ಕಾರ್ಯಗತಗೊಳಿಸಲ್ಪಟ್ಟಿದ್ದು, ಪ್ರಗತಿಯು ತೃಪ್ತಿಕರವಾಗಿರುತ್ತದೆ. 1994ರ ಮಾರ್ಚ್ 31ರ ಅಂತ್ಯದೊಳಗಾಗಿ ಎಲ್ಲಾ ಪಟ್ಟಣಗಳಲ್ಲಿ ಈ ಯೋಜನೆಯ ಕಾರ್ಯವನ್ನು ಪೂರ್ಣಗೊಳಿಸಲು ಪೂರ್ಣ ಪ್ರಯತ್ನಗಳನ್ನು ಮಾಡಲಾಗಿದೆ.

6.11 <u>ಆರ್ಥಿಕ ವ್ಯವಸ್ಥೆ</u>

ಅ. <u>ಹಿಂದಿನ ನಿವಾರ್ಣ</u>

| ಕನ್ವರ್ಷನ್ | ಸಹಾಯಧನ | ಹುಡ್ಕೋ ಸಾಲ | ಫಲಾನುಭವಿಯ ವಂತಿಕೆ |
|---|---|---|---|
| 1) ಆರ್ಥಿಕವಾಗಿ ಹಿಂದುಳಿದ ವರ್ಗ | ಶೇಕಡ 45 | ಶೇಕಡ 50 | ಶೇಕಡ 5 |
| 2) ಕಡಿಮೆ ಆದಾಯದ ವರ್ಗ | ಶೇಕಡ 25 | ಶೇಕಡ 60 | ಶೇಕಡ 15 |
| 3) ಎಮ್‌ಐಜಿ: ಹೆಚ್‌ಐಜಿ | — | ಶೇಕಡ 75 | ಶೇಕಡ 25 |

ಆ <u>ಹೊಸ ನಿವಾರ್ಣ</u>

| | | | |
|---|---|---|---|
| 1) ಆರ್ಥಿಕವಾಗಿ ಹಿಂದುಳಿದ ವರ್ಗ | ಶೇಕಡ 25 | ಶೇಕಡ 68 | ಶೇಕಡ 7 |
| 2) ಕಡಿಮೆ ಆದಾಯದ ವರ್ಗ | ಶೇಕಡ 14 | ಶೇಕಡ 71 | ಶೇಕಡ 15 |
| 3) ಎಮ್.ಐ.ಜಿ: ಹೆಚ್.ಐ.ಜಿ. | — | ಶೇಕಡ 75 | ಶೇಕಡ 25 |

## 7 ಮಹಾ ನಗರ ಪಾಲಿಕೆಗಳು

7.1 ಕರ್ನಾಟಕ ರಾಜ್ಯದಲ್ಲಿ 7 ಮಹಾನಗರ ಪಾಲಿಕೆಗಳು ಪ್ರಸ್ತುತ ಸಾಲಿನ ವರದಿಯಂತೆ ಕಾರ್ಯಾಚರಣೆಯಲ್ಲಿರುತ್ತವೆ. ಅವುಗಳೆಂದರೆ ಬೆಂಗಳೂರು ಮಹಾನಗರ ಪಾಲಿಕೆ, ಬೆಳಗಾವಿ ಮಹಾನಗರ ಪಾಲಿಕೆ, ಹುಬ್ಬಳ್ಳಿ-ಧಾರವಾಡ ಮಹಾ ನಗರ ಪಾಲಿಕೆ, ಮಂಗಳೂರು ಮಹಾನಗರ ಪಾಲಿಕೆ, ಮೈಸೂರು ಮಹಾನಗರ ಪಾಲಿಕೆ, ಗುಲ್ಬರ್ಗ ಮಹಾನಗರ ಪಾಲಿಕೆ ಹಾಗೂ ಶಿವಮೊಗ್ಗ-ಭದ್ರಾವತಿ ಮಹಾನಗರ ಪಾಲಿಕೆಗಳು.

ತಃಖ್ತೆ-1

7.2 [illegible] ಅನುದಾನ ಬಳಕೆ

(ರೂ. ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ಮಹಾನಗರ ಪಾಲಿಕೆಗಳು | 1994-95 (ಡಿಸೆಂಬರ್ 94) ಒದಗಿಸಿದ ಹಣ | ಬಳಕೆ ಮಾಡಿದ ಹಣ |
|---|---|---|---|
| 1 | ಬೆಂಗಳೂರು | 12.87 | 12.87 |
| 2 | ಬೆಳಗಾವಿ | 5.52 | 4.14 |
| 3 | ಗುಲ್ಬರ್ಗ | 1.32 | 0.99 |
| 4 | ಹುಬ್ಬಳ್ಳಿ-ಧಾರವಾಡ | 9.40 | 7.05 |
| 5 | ಮಂಗಳೂರು | 4.44 | 3.33 |
| 6 | ಮೈಸೂರು | 4.88 | 3.68 |
| 7 | ಶಿವಮೊಗ್ಗ-ಭದ್ರಾವತಿ | 1.80 | 1.35 |
| | ಒಟ್ಟು | 40.23 | 33.39 |

ತಃಖ್ತೆ-2

7.3 ಮಹಾನಗರ ಪಾಲಿಕೆಗಳ ಆದಾಯ ಮತ್ತು ವೆಚ್ಚಗಳನ್ನು ವಿವರಿಸಿದೆ.

(ರೂ. ಕೋಟಿಗಳಲ್ಲಿ)

| ಕ್ರಮ ಸಂಖ್ಯೆ | ಮಹಾನಗರ ಪಾಲಿಕೆಗಳು | ಆದಾಯ | ವೆಚ್ಚ | ಬಾಕಿ |
|---|---|---|---|---|
| 1 | ಬೆಂಗಳೂರು | — ಮಾಹಿತಿ ದೊರೆತಿಲ್ಲ — | | |
| 2 | ಬೆಳಗಾಂ | 13.96 | [illegible] 12.17 | [illegible] 1.79 |
| 3 | ಗುಲ್ಬರ್ಗ | 18.62 | 18.62 | — |
| 4 | ಹುಬ್ಬಳ್ಳಿ-ಧಾರವಾಡ | 13.00 | 12.20 | 0.80 |
| 5 | ಮಂಗಳೂರು | 7.96 | 5.66 | 2.30 |
| 6 | ಮೈಸೂರು | 17.50 | 16.16 | 1.34 |
| 7 | ಶಿವಮೊಗ್ಗ-ಭದ್ರಾವತಿ | 9.64 | 9.44 | 0.20 |
| | ಒಟ್ಟು | 80.68 | 74.25 | 6.43 |





ತ:ಪ್ರ-3

7.4 ಮಹಾನಗರ ಪಾಲಿಕೆಗಳ ಬೇಡಿಕೆ, ವಸೂಲಿ ಮತ್ತು ಬಾಕಿ ಈ ಕೆಳಗಿನಂತಿದೆ:—

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಮಹಾನಗರ ಪಾಲಿಕೆ | ಬೇಡಿಕೆ | ವಸೂಲಿ | ಬಾಕಿ |
|---|---|---|---|---|
| 1. | ಬೆಂಗಳೂರು | 8532.30 | 3214.61 | 5317.69 |
| 2. | ಬೆಳಗಾಂ | 340.44 | 151.59 | 188.85 |
| 3. | ಗುಲ್ಬರ್ಗಾ | 207.15 | 66.57 | 140.58 |
| 4. | ಹುಬ್ಬಳ್ಳಿ ಧಾರವಾಡ | 1142.00 | 480.00 | 662.00 |
| 5. | ಮಂಗಳೂರು | 613.00 | 277.00 | 336.00 |
| 6. | ಮೈಸೂರು | 1151.35 | 366.76 | 784.59 |
| 7. | ಶಿವಮೊಗ್ಗ ಭದ್ರಾವತಿ | 260.81 | 102.98 | 157.83 |
| | ಒಟ್ಟು | 12247.05 | 4659.51 | 7587.54 |

7.5 ಪ್ರತಿಯೊಂದು ಮಹಾನಗರ ಪಾಲಿಕೆಯು ತನ್ನ ಆಯವ್ಯಯದಲ್ಲಿ ಶೇಕಡ 18 ರಷ್ಟು ಹಣವನ್ನು ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡಗಳ ಏಳಿಗೆಗಾಗಿ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಸಲುವಾಗಿ ಶೇಕಡ 18 ರಷ್ಟು ಹಣವನ್ನು ಮೀಸಲಾಗಿಡಬೇಕಾಗಿದೆ. ಈ ದಿಸೆಯಲ್ಲಿ ಮಹಾನಗರ ಪಾಲಿಕೆಗಳು ಶೇಕಡ 18ರಷ್ಟು ಹಣವನ್ನು ತ:ಪ್ರ-4ರಲ್ಲಿ ವಿವರಿಸಲಾಗಿದೆ.

ತ:ಪ್ರ-4

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಮಹಾನಗರ ಪಾಲಿಕೆಗಳು | ಆಯವ್ಯಯದ ಶೇಕಡ 18ರ ಖರ್ಚಿನ ವಿವರ |
|---|---|---|
| 1. | ಬೆಂಗಳೂರು | 100.00 |
| 2. | ಬೆಳಗಾಂ | 2.08 |
| 3. | ಗುಲ್ಬರ್ಗಾ | 36.15 |
| 4. | ಹುಬ್ಬಳ್ಳಿ-ಧಾರವಾಡ | 8.61 |
| 5. | ಮಂಗಳೂರು | 39.42 |
| 6. | ಮೈಸೂರು | 66.53 |
| 7. | ಶಿವಮೊಗ್ಗ-ಭದ್ರಾವತಿ | 9.28 |
| | ಒಟ್ಟು | 262.07 |

## 7.6 ಬೆಂಗಳೂರು ಮಹಾನಗರ ಪಾಲಿಕೆ

1. ಬೆಂಗಳೂರು ಮಹಾನಗರ ಪಾಲಿಕೆಯು 151.16 ಚ.ಕಿ.ಮೀ. ವಿಸ್ತೀರ್ಣ ಹೊಂದಿದ್ದು, 1991ರ ಜನಗಣತಿ ಪ್ರಕಾರ ಇದರ ಜನಸಂಖ್ಯೆ 26.51 ಲಕ್ಷ ಇರುತ್ತದೆ. ಕಳೆದ ಒಂದು ದಶಕದಲ್ಲಿ ಇದರ ಬೆಳವಣಿಗೆ 7.04 ಇದ್ದು ಪ್ರತಿ ಸಾವಿರ ಪುರುಷರಿಗೆ ಹೋಲಿಸಿದಾಗ ಮಹಿಳೆಯರ ಸಂಖ್ಯೆ 913 ಇರುತ್ತದೆ. ಬೆಂಗಳೂರು ಮಹಾನಗರದ ಜನಸಾಂದ್ರತೆಯು 17,538. ಆಕ್ಟ್ರಾಯ್ ಸಂಪೂರ್ಣವಾಗಿ ರದ್ದಾದ ನಂತರ ನಗರ ಪಾಲಿಕೆಗೆ ಬರುವ ಆದಾಯವು ನಗರಾಸ್ತಿ ತೆರಿಗೆ ಮತ್ತು ಮಾರುಕಟ್ಟೆ ಫೀ ಗಳಾಗಿರುತ್ತದೆ.

2. 1993-94, 1994-95 (ಡಿಸೆಂಬರ್ 1994) ಮಹಾ ನಗರ ಪಾಲಿಕೆಯ ಬೇಡಿಕೆ, ವಸೂಲಿ ಮತ್ತು ಬಾಕಿ ಈ ಕೆಳಕಂಡಂತಿದೆ:—

(ರೂ ಲಕ್ಷಗಳಲ್ಲಿ)

| | ಆಸ್ತಿ ತೆರಿಗೆ | | ಮಾರುಕಟ್ಟೆ | |
|---|---|---|---|---|
| | 93-94 | 94-95 | 93-94 | 94-95 |
| ಬೇಡಿಕೆ | 7645.96 | 8150.07 | 104.07 | 382.23 |
| ವಸೂಲಿ | 4497.37 | 3093.54 | 49.46 | 121.07 |
| ಬಾಕಿ | 3148.59 | 5056.53 | 54.61 | 261.16 |

3. ಶೇಕಡ 18ರ ಮೀಸಲಾತಿ ಅನುದಾನದಲ್ಲಿ ಮಹಾನಗರ ಪಾಲಿಕೆಯು 100.00 ಲಕ್ಷ ರೂಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರ ಏಳಿಗೆಗಾಗಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೊಂಡಿರುತ್ತದೆ.

| ವಿವರಗಳು | 1993-94 | 1994-95 |
|---|---|---|
| 1) 1993-94ರಲ್ಲಿ 1490 ಮನೆಗಳಿಗೆ ಹಾಗೂ 1994-95ರಲ್ಲಿ 1752 ಮನೆಗಳಿಗೆ ಉಚಿತ ವಿದ್ಯುದ್ದೀಪ ಸೌಲಭ್ಯ ಒದಗಿಸಲು ತಗಲಿದ ವೆಚ್ಚ. | ರೂ:54.91 | 48.76 |
| 2) ಮಹಾನಗರ ಪಾಲಿಕೆ ಶಿಶುವಿಹಾರದ ಮಕ್ಕಳಿಗೆ ಹಾಲು ಮತ್ತು ಬ್ರೆಡ್ ಒದಗಿಸಲು ತಗಲುವ ವೆಚ್ಚ | ರೂ: 8.65 | — |
| 3) ಮಹಾನಗರ ಪಾಲಿಕೆಯು ಪ್ರಾಥಮಿಕ ಮತ್ತು ಪ್ರೌಢ ಶಾಲೆ ವಿದ್ಯಾರ್ಥಿಗಳಿಗೆ ನೋಟು ಬುಕ್ ಮತ್ತು ಪಠ್ಯ ಪುಸ್ತಕ ಒದಗಿಸಲು ತಗಲುವ ವೆಚ್ಚ | ರೂ: 5.34 | 8.20 |

4) ಮಹಿಳೆಯರಿಗಾಗಿ ನಗರ ಪಾಲಿಕೆಯು ರೂ :80.29 ಲಕ್ಷ ವೆಚ್ಚದಲ್ಲಿ ಟೈಲರಿಂಗ್ ಕಂಪ್ಯೂಟರ್ ಎಂಬ್ರಾಯಿಡರಿಗಳಲ್ಲಿ ತರಬೇತಿ ಕಾರ್ಯಕ್ರಮ ನಡೆಸಿದೆ.

4. <u>ನೆಹರು ರೋಜಗಾರ ಯೋಜನೆ</u>:-

ಈ ಕಾರ್ಯಕ್ರಮದಲ್ಲಿ ಮಹಾನಗರ ಪಾಲಿಕೆಯು 396.74 ಲಕ್ಷ ರೂ.ಗಳ ಸಾಲ ಹಾಗೂ 47.95 ಲಕ್ಷ ರೂ.ಗಳ ಸಹಾಯ ಧನವನ್ನು 1823 ಫಲಾನುಭವಿಗಳಿಗೆ ಸಹಾಯವನ್ನು ಕಲ್ಪಿಸಿ ಕೊಟ್ಟಿರುತ್ತದೆ. ಅಲ್ಲದೆ ಮಹಾನಗರ ಪಾಲಿಕೆಯು 193 ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಿದೆ.

5. <u>ಆರೋಗ್ಯ ಮತ್ತು ನೈರ್ಮಲ್ಯ</u>:-

151.16 ಚ.ಕಿ.ಮಿ.ವಿಸ್ತೀರ್ಣವುಳ್ಳ ಬೆಂಗಳೂರು ಮಹಾನಗರ ಪಾಲಿಕೆಯು ನಗರ ನೈರ್ಮಲ್ಯ ಹಾಗೂ ಸ್ವಚ್ಛತಾ ಕಾರ್ಯಕ್ರಮವನ್ನು ನಡೆಸಿ ಕೊಂಡು ಹೋಗುವ ಭಾರ ಮಹಾನಗರ ಪಾಲಿಕೆಯದ್ದಾಗಿರುತ್ತದೆ. ಪ್ರತಿದಿನ ಸರಾಸರಿ 1800 ಟನ್‌ಗಳಷ್ಟು ಹೊರಬೀಳುವ ಕಸಕಡ್ಡಿಗಳನ್ನು ಸ್ವಚ್ಛಗೊಳಿಸುವ ಸಲುವಾಗಿ ನಗರ ಪಾಲಿಕೆಯು 6679 ಪೌರಕಾರ್ಮಿಕರ ಸೇವೆಯನ್ನು ಪಡೆಯುತ್ತಿದೆ.

ಇದಲ್ಲದೆ ಮಹಾನಗರ ಪಾಲಿಕೆಗೆ ಹೊಸದಾಗಿ ಸೇರ್ಪಡೆಯಾದ 41 ಬಡಾವಣೆಗಳಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ನಡೆಸಿಕೊಂಡು ಹೋಗಲು ಖಾಸಗಿ ಗುತ್ತಿಗೆದಾರರಿಗೆ ಟೆಂಡರ ಮೂಲಕ ಕಾರ್ಯವನ್ನು ನಿರ್ವಹಿಸುವಂತೆ ಆದೇಶ ನೀಡಿರುತ್ತದೆ. ಈ ಖಾಸಗಿ ಗುತ್ತಿಗೆದಾರರ ನೇಮಕಾತಿಯಿಂದ ಮಹಾ ನಗರ ಪಾಲಿಕೆಗೆ ಶೇಕಡ 30 ರಿಂದ 40 ರಷ್ಟು ವಾರ್ಷಿಕ ಉಳಿತಾಯ ಕಂಡು ಬಂದಿದೆ. ಅಷ್ಟೇ ಅಲ್ಲದೆ ಕಾರ್ಯಕ್ರಮವು ಬಿರುಸಾಗಿ ಭರದಿಂದ ಸಾಗುತ್ತಿದ್ದು ನಗರ ನೈರ್ಮಲ್ಯದಲ್ಲಿನ ಗುಣಮಟ್ಟವನ್ನು ಸುಧಾರಿಸುವಲ್ಲಿ ಸಹಾಯವಾಗಿದೆ.

6. <u>ಭಾರತೀಯ ಜನಸಂಖ್ಯಾ ಯೋಜನೆ</u>:-

ಮಹಾನಗರ ಪಾಲಿಕೆಯು ಈ ಕಾರ್ಯಕ್ರಮದಡಿಯಲ್ಲಿ 64 ಆರೋಗ್ಯ ಕೇಂದ್ರವನ್ನು ಸ್ಥಾಪಿಸುವ ಹಾಗೂ 24 ಹೆರಿಗೆ ಆಸ್ಪತ್ರೆಗಳನ್ನು ಮೇಲ್ದರ್ಜೆಗೆ ಏರಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

ಈ ಯೋಜನೆ ಕುಟುಂಬ ಕಲ್ಯಾಣ ಕಾರ್ಯಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುವುದಲ್ಲದೆ 50 ಸಾವಿರ ಜನಸಂಖ್ಯೆ ಇರುವ ಪ್ರದೇಶಗಳಿಗೆ ಒಂದು ಆರೋಗ್ಯ ಕೇಂದ್ರವನ್ನು ಹಾಗೂ 2 ಲಕ್ಷ ಜನಸಂಖ್ಯೆ ಇರುವ ಪ್ರದೇಶಕ್ಕೆ ಒಂದು ರೆಫರಲ ಆಸ್ಪತ್ರೆಯನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿರುತ್ತದೆ.

ಈ ಕಾರ್ಯಕ್ರಮಕ್ಕೆ ತಗಲುವ ಅಂದಾಜು ವೆಚ್ಚ 29.00 ಕೋಟಿ ರೂ.ಗಳು.

7. <u>ರಾಷ್ಟ್ರೀಯ ಕ್ಷಯ ರೋಗ ನಿಯಂತ್ರಣ ಯೋಜನೆ</u>:-

ಈ ಯೋಜನೆಯನ್ನು ವಿಶ್ವ ಆರೋಗ್ಯ ಸಂಸ್ಥೆ ಹಾಗೂ ಭಾರತ ಸರ್ಕಾರದ ಸಹಯೋಗದೊಂದಿಗೆ ಕೈಗೊಳ್ಳುವಂತೆ ಪ್ರಥಮ ಹಂತದಲ್ಲಿ ಯೋಜನಾ ಅನುಷ್ಠಾನದ ಬಗ್ಗೆ ನಗರ ಪಾಲಿಕೆ ಅಧಿಕಾರಿಗಳ ತರಬೇತಿಯನ್ನು ಈಗಾಗಲೆ ನೀಡಿದೆ. ಶಾಂತಿ ನಗರ ಕ್ಷೇತ್ರಕ್ಕೆ ಈ ಯೋಜನೆ ಮಂಜೂರಾಗಿ ದೊರಕಿದೆ.

8. ಇತರೆ ಅಭಿವೃದ್ಧಿ ಕಾರ್ಯಕ್ರಮಗಳು :-

1994-95ರ ಸಾಲಿಗೆ ಮಹಾನಗರ ಪಾಲಿಕೆಯು ಹಮ್ಮಿಕೊಂಡಿರುವ ಇತರೆ ಅಭಿವೃದ್ಧಿ ಕಾರ್ಯಕ್ರಮಗಳು ಈ ಕೆಳಕಂಡಂತಿವೆ:-

(ರೂ.ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಕಾರ್ಯಕ್ರಮದ ಹೆಸರು | ಅಂದಾಜು ವೆಚ್ಚ | ಪ್ರಸಕ್ತ ಸಾಲಿನ ವೆಚ್ಚ | ಒಟ್ಟು ವೆಚ್ಚ |
|---|---|---|---|---|
| 1. | ಆಧುನಿಕ ಶೌಚಾಲಯಗಳ ನಿರ್ಮಾಣ. | 186.00 | 67.89 | 314.86 |
| 2. | ಮಾಂಸದ ಮಾರುಕಟ್ಟೆ ನಿರ್ಮಾಣ. | 77.00 | 6.77 | 87.37 |
| 3. | ಶ್ರೀಕೃಷ್ಣ ರಾಜೇಂದ್ರ ಮಾರುಕಟ್ಟೆಯ ನವೀಕರಣದ ಮೊದಲನೇ ಹಂತ. | 160.00 | 120.07 | 517.17 |
| 4. | ಶ್ರೀ ಕೃಷ್ಣರಾಜೇಂದ್ರ ಮಾರುಕಟ್ಟೆಯ ನವೀಕರಣದ ಎರಡನೇ ಹಂತ. | 450.00 | 319.98 | 1850.99 |
| 5. | ಶ್ರೀಕೃಷ್ಣರಾಜೇಂದ್ರ ಮಾರುಕಟ್ಟೆಯ ನವೀಕರಣದ ಮೂರನೇ ಹಂತ. | 666.00 | 169.07 | 979.98 |
| 6. | ಮಡಿವಾಳ ಸಂತೆ ಮೈದಾನ ದಲ್ಲಿ ವ್ಯಾಪಾರ ಸಂಕೀರ್ಣದ ನಿರ್ಮಾಣದ ಮೊದಲನೇ ಹಂತ. | 140.00 | 8.78 | 331.18 |
| 7. | ಮಡಿವಾಳ ಸಂತೆ ಮೈದಾನ ವ್ಯಾಪಾರ ಸಂಕೀರ್ಣದ ನಿರ್ಮಾಣದ ಎರಡನೇ ಹಂತ. | 260.00 | 95.51 | 417.56 |
| 8. | ನಗರದ ರೈಲ್ವೇ ನಿಲ್ದಾಣದ ಬಳಿ ಗುಬ್ಬಿತೋಟದ ರಸ್ತೆಯಲ್ಲಿ ಸುರಂಗ ಮಾರ್ಗ ನಿರ್ಮಾಣ ಕಾರ್ಯ. | 65.00 | 50.05 | 151.82 |
| 9. | ಜಯನಗರ ಎರಡನೇ ಬ್ಲಾಕಿನಲ್ಲಿ [illegible] ವ್ಯಾಪಾರ ಸಂಕೀರ್ಣಗಳಿಗೆ ನಿರ್ಮಾಣ. | 125.00 | — | 17.34 |
| 10. | ನರಸಿಂಹರಾಜ ಕಾಲೋನಿಯಲ್ಲಿ ವ್ಯಾಪಾರ ಮತ್ತು ಕಛೇರಿಗಳ ಸಂಕೀರ್ಣದ ನಿರ್ಮಾಣದ ಮೊದಲನೇ ಹಂತ. | 14.60 | 4.50 | 22.58 |
| 11. | ಕೃಷ್ಣರಾಜೇಂದ್ರ ಮಾರುಕಟ್ಟೆಯ ಬಳಿ [illegible] ರಸ್ತೆ. | ಕಾರ್ಯಕ್ರಮ ಪ್ರಾರಂಭವಾಗಿದೆ. | | |
| 12. | ವೃಷಭಾವತಿ ನಾಲೆಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಕಾರ್ಯ | 24.21 | — | — |
| 13. | ಹಡ್ಸನ್ ವೃತ್ತದಿಂದ ಟೌನ್‌ಹಾಲ್ ವೃತ್ತದವರೆಗೆ ಸುರಂಗ ಮಾರ್ಗಗಳ ಸೂಕ್ತಗೊಂಡ ಮೇಲು ಸೇತುವೆ ನಿರ್ಮಾಣ(ಫ್ಲೈ ಓವರ್) | 3500.00 | — | 31.18 |
| 14. | ಟೌನ್‌ಹಾಲ್ ವೃತ್ತದಿಂದ ಸಿರಸಿ ವೃತ್ತದವರೆಗೆ ಮೇಲು ಸೇತುವೆ (ಫ್ಲೈ ಓವರ್) ನಿರ್ಮಾಣ. | 3500.00 | — | 30.57 |

1995-96ರ ಸಾಲಿಗೆ ಮಹಾನಗರ ಪಾಲಿಕೆಯು ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೊಳ್ಳುವುದಾಗಿ ನಿಶ್ಚಯಿಸಿರುತ್ತದೆ.

9. <u>ಮುಖ್ಯ ರಸ್ತೆ ನಿರ್ಮಾಣ ಕಾರ್ಯಗಳು</u>:

ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುವ ಕೆಲವು ಮುಖ್ಯ ರಸ್ತೆಗಳನ್ನು 75.79 ಲಕ್ಷ ರೂ.ಗಳ ವೆಚ್ಚದೊಂದಿಗೆ ಡಾಂಬರೀಕರಣ ಕಾರ್ಯವನ್ನು ಇಂಜಿನಿಯರಿಂಗ್ ವಿಭಾಗದವರೇ ಮಾಡಿರುತ್ತಾರೆ. ಈ ಕೆಲಸಕ್ಕಾಗಿ 1994-95ನೇ ಸಾಲಿನ ಆಯವ್ಯಯದಲ್ಲಿ ಮೂರು ಲಕ್ಷ ರೂ.ಗಳನ್ನು ಒದಗಿಸಲಾಗಿದೆ.

10. <u>ಸಂಚಾರಿ ಇಂಜಿನಿಯರಿಂಗ್ ಘಟಕದ ಕಾಮಗಾರಿಗಳು</u> :-

ವಿವಿಧ 22 ವೃತ್ತಗಳಲ್ಲಿ ಸಂಚಾರಿ ಸಂಕೇತ(ಸಿಗ್ನಲ)ಗಳನ್ನು ಒದಗಿಸಲು 95 ಲಕ್ಷ ರೂ.ಗಳನ್ನು ಮಂಜೂರು ಮಾಡಲಾಗಿದೆ ಮತ್ತು ಈ ಕೆಲಸವನ್ನು ಮೆಸರ್ಸ್ ಎಲೆಕ್ಟ್ರಿಕ್ ಮತ್ತು ಕಿಯೋನಿಕ್ಸ್ ಸಂಸ್ಥೆಗಳಿಗೆ ವಹಿಸಿಕೊಡಲಾಗಿದೆ. ಸಂಚಾರ ಸುಧಾರಣೆಗಾಗಿ ಪಾದಚಾರಿ ರಸ್ತೆಗಳಲ್ಲಿ ಬಾರಿಕೇಡ್ಸ್‌ಗಳನ್ನು ಮತ್ತು ವಿವಿಧ ವೃತ್ತಗಳನ್ನು ಅಭಿವೃದ್ಧಿ ಪಡಿಸಿ, ರಸ್ತೆಗಳನ್ನು ಅಗಲಗೊಳಿಸುವ ಕಾರ್ಯಕ್ರಮವನ್ನು 1.79 ಕೋಟಿ ರೂ.ಗಳಲ್ಲಿ ಕೈಗೊಳ್ಳಲಾಗಿದೆ. 30 ಲಕ್ಷ ರೂ.ಗಳನ್ನು ಪೊಲೀಸ್ ಇಲಾಖೆ(ಸಂಚಾರಿ) ರಸ್ತೆಗೆ ಗುರುತು ಹಾಕುವ ಬಣ್ಣದ ಸಲುವಾಗಿ ನೀಡಲಾಗಿದೆ. ತೋಟಗಾರಿಕೆ ಇಲಾಖೆಯಿಂದ ವಿವಿಧ ಉದ್ಯಾನವನಗಳನ್ನು ಅಭಿವೃದ್ಧಿ ಪಡಿಸಲು ಮತ್ತು ಕೊಳವೆ ಬಾವಿಗಳನ್ನು ನಿರ್ಮಿಸಲು 100 ಲಕ್ಷ ರೂ.ಗಳನ್ನು ಖರ್ಚು ಮಾಡಲಾಗಿದೆ.

11. <u>1995-96ನೇ ಸಾಲಿಗೆ ಬೆಂಗಳೂರು ಮಹಾನಗರ ಪಾಲಿಕೆಯು ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ನಿಶ್ಚಯಿಸಿರುತ್ತದೆ</u>:-

(1) 200 ಲಕ್ಷ ರೂ. ಅಂದಾಜು ವೆಚ್ಚದೊಂದಿಗೆ ಕೆಂಪೇಗೌಡ ರಸ್ತೆಯಲ್ಲಿ, 381.51 ಲಕ್ಷ ರೂ.ಗಳ ಅಂದಾಜು ವೆಚ್ಚದೊಂದಿಗೆ ಮೈಸೂರು ಬ್ಯಾಂಕ್ ವೃತ್ತದಲ್ಲಿ, 200 ಲಕ್ಷ ರೂ.ಗಳ ಅಂದಾಜು ವೆಚ್ಚದೊಂದಿಗೆ ಸಂಗಮ ಚಿತ್ರ ಮಂದಿರದ ಬಳಿ ಹಾಗೂ 80.60 ಲಕ್ಷ ರೂ.ಗಳ ಅಂದಾಜು ವೆಚ್ಚದೊಂದಿಗೆ ಸುಜಾತ ಚಿತ್ರ ಮಂದಿರದ ಬಳಿ ಪಾದಚಾರಿ ಸುರಂಗ ಮಾರ್ಗ ನಿರ್ಮಾಣ.

(2) 300 ಲಕ್ಷ ರೂ.ಗಳ ಅಂದಾಜು ವೆಚ್ಚದೊಂದಿಗೆ [illegible] ರಸ್ತೆಯಲ್ಲಿ, 200.80 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ತ್ರಿಭುವನ ಚಿತ್ರಮಂದಿರದ ಬಳಿ ಹಾಗೂ 200 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ ಕೃಷ್ಣರಾಜೇಂದ್ರ ಮಾರುಕಟ್ಟೆಯ ಬಳಿ ಕಾರು ನಿಲ್ದಾಣ ನಿರ್ಮಾಣ ಕಾರ್ಯ.

3. ಮಲ್ಲೇಶ್ವರದಲ್ಲಿ 572 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಮಾರುಕಟ್ಟೆ ಸಂಕೀರ್ಣ ನಿರ್ಮಾಣ ಕಾರ್ಯ.

4. 500 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ವಿವಿಧೋದ್ದೇಶ ವಾಣಿಜ್ಯ ಸಂಕೀರ್ಣವನ್ನು ಅಕ್ಕಿತಿಮ್ಮನಹಳ್ಳಿಯಲ್ಲಿ ನಿರ್ಮಾಣ.

5. ಯಡಿಯೂರಿನಲ್ಲಿ 65.56 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ವಿವಿಧೋದ್ದೇಶ ಶಾಲೆಯ ನಿರ್ಮಾಣ.

6. 25.00 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ವಿಭಾಗ ನಂ:16 ಅಗ್ರಹಾರ ದಾಸರಹಳ್ಳಿಯಲ್ಲಿ ಡಾ:ಅಂಬೇಡ್ಕರ ಕ್ರೀಡಾಂಗಣ (ಸ್ಟೇಡಿಯಂ) ನಿರ್ಮಾಣ.

7. 172 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಶೇಷಾದ್ರಿಪುರಂನಲ್ಲಿ ವಾಣಿಜ್ಯ ಸಂಕೀರ್ಣದ ನಿರ್ಮಾಣ.

7.7 ಬೆಳಗಾಂ ಮಹಾನಗರ ಪಾಲಿಕೆ

1. ಬೆಳಗಾಂ ಮಹಾನಗರ ಪಾಲಿಕೆಯ ಪ್ರಸಕ್ತ ಕೌನ್ಸಿಲ್ ಏಪ್ರಿಲ್ 1990ರಿಂದ ಅಧಿಕಾರಕ್ಕೆ ಬಂದಿದ್ದು, ನಗರ ಪಾಲಿಕೆಯಲ್ಲಿ 51 ಜನ ಕೌನ್ಸಿಲರುಗಳನ್ನು ಒಳಗೊಂಡಿದ್ದು 3 ಸ್ಥಾನಗಳನ್ನು ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದ ಅಭ್ಯರ್ಥಿಗೆ ಕಾದಿರಿಸಿದೆ. 1991ರ ಜನಗಣತಿಯ ಪ್ರಕಾರ ಬೆಳಗಾಂ ಮಹಾನಗರ ಪಾಲಿಕೆಯ ಜನಸಂಖ್ಯೆ 3.68 ಲಕ್ಷಗಳಾಗಿರುತ್ತದೆ.

2. 1994-95ನೇ ಸಾಲಿಗೆ ಮಹಾನಗರ ಪಾಲಿಕೆಯ ಆದಾಯ ರೂ 1396.00 ಲಕ್ಷಗಳಿದ್ದು ಈ ಸಂಗ್ರಹಣೆಯು ತೆರಿಗೆ ವಸೂಲಾತಿ ಆಕ್ಟ್ರಾಯ್ ಮತ್ತು ವಾಹನ ತೆರಿಗೆ ಇವು ಪ್ರಮುಖವಾಗಿ ಮೂಲಗಳಾಗಿವೆ. ಬೇಡಿಕೆಗೆ ಹೋಲಿಸಿದರೆ ತೆರಿಗೆ ವಸೂಲಾತಿಯು ಶೇಕಡ 45.89ರಷ್ಟಿರುತ್ತದೆ.

3. ಶೇಕಡ 18ರ ಹಣದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಏಳಿಗೆಗಾಗಿ ಸುಮಾರು 2.08 ಲಕ್ಷ ರೂಗಳಲ್ಲಿ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

4. ಅಭಿವೃದ್ಧಿ ಕಾರ್ಯಕ್ರಮಗಳು:

ಮಹಾನಗರ ಪಾಲಿಕೆಯು ರೂ 70.61 ಲಕ್ಷ ಅಂದಾಜು ವೆಚ್ಚದಲ್ಲಿ 128 ಕೊಳವೆ ಬಾವಿಗಳನ್ನು ತೋಡಿದೆ. 12 ಬಾವಿಗಳಲ್ಲಿ ನೀರಿನ ಪ್ರಮಾಣ ಹೆಚ್ಚಾಗಿದ್ದುದರಿಂದ ಕೊಳವೆಗೆ ಜೋಡಿಸಿ ನೀರು ಸರಬರಾಜುಗೊಳಿಸುತ್ತಿದೆ. ಇದರಿಂದಾಗಿ ಬಡಾವಣೆಗಳಲ್ಲಿನ ಜನರ ನೀರಿನ ಬವಣೆಯನ್ನು ನೀಗಿಸುವಲ್ಲಿ ಮಹಾನಗರ ಪಾಲಿಕೆಯು ಮುನ್ನಡೆಸಿದೆ. ಪೈಪ್ ಅಳವಡಿಸಲು ನಗರ ಪಾಲಿಕೆ ರೂ 14.18 ಲಕ್ಷ ಹಣವನ್ನು ಖರ್ಚು ಮಾಡಿದೆ.

5759-6

ಮಹಾನಗರ ಪಾಲಿಕೆಯು ಒಳಚರಂಡಿ ವ್ಯವಸ್ಥೆಯಲ್ಲಿ ರೂ :3.05 ಲಕ್ಷ ಹಣವನ್ನು ಖರ್ಚು ಮಾಡಿದೆ. ಅಲ್ಲದೆ ಒಳ ಚರಂಡಿ ವ್ಯವಸ್ಥೆಯಲ್ಲಿ ನಿರ್ವಹಣೆಗೆಂದು ರೂ:28.26 ಲಕ್ಷ ಹೊಸಗಟ್ಟರ್ ಕಾರ್ಯಕ್ರಮಗಳಿಗೆಂದು ರೂ:66.20 ಲಕ್ಷ ಹಣವನ್ನು ಖರ್ಚು ಮಾಡಿ ನಾಗರೀಕ ಸೌಲಭ್ಯವನ್ನು ಕಲ್ಪಿಸಿದೆ.

ಅಲ್ಲದೆ ಪ್ಲಾನ್ ಪ್ರಾಯೋಜಿತ ಕಾರ್ಯಕ್ರಮವನ್ನು ಈ ಶೀರ್ಷಿಕೆಯಲ್ಲಿ ನಿರ್ವಹಿಸಿದೆ.

| | | |
|---|---|---|
| ರಸ್ತೆಯ ನಿರ್ಮಾಣ | . | ರೂ 31.87 ಲಕ್ಷ |
| [illegible] | . | ರೂ 88.84 ಲಕ್ಷ |
| ಹೊರವಲಯ ಅಭಿವೃದ್ಧಿ ಕಾರ್ಯಕ್ರಮ | . | ರೂ 42.60 ಲಕ್ಷ |

<u>ಎನ್.ಆರ್.ವೈ:</u>

ಅ) ಅರ್ಬನ್ ಮೈಕ್ರೋ ಎಂಟರ್‌ಪ್ರೈಸ್ ಯೋಜನೆಯಲ್ಲಿ ನಗರ ಪಾಲಿಕೆಯು 472 ಅರ್ಜಿಗಳನ್ನು ಸ್ವೀಕರಿಸಿ ಸಾಲ ಮಂಜೂರಾತಿಗೆಂದು 43 ರಾಷ್ಟ್ರೀಕೃತ ಬ್ಯಾಂಕುಗಳಿಗೆ ಕಳುಹಿಸಿಕೊಡಲಾಗಿದೆ. ಅವುಗಳ ಪೈಕಿ 322 ಅರ್ಜಿಗಳ ಮಂಜೂರಾತಿ ದೊರೆತಿದ್ದು 136 ಅರ್ಜಿಗಳನ್ನು ತಿರಸ್ಕರಿಸಿದೆ. ಒಟ್ಟು ರೂ: 9.96 ಲಕ್ಷ ಸಹಾಯ ಧನ ಮತ್ತು ರೂ: 29.88 ಲಕ್ಷ ಸಾಲವನ್ನು ವಿತರಿಸಿದೆ.

ಬ) ಅರ್ಬನ್ ವೇಜ ಎಂಪ್ಲಾಯ್‌ಮೆಂಟ್ ಮಹಾನಗರ ಪಾಲಿಕೆಗೆ ಅನ್ವಯಿಸುವುದಿಲ್ಲ.

ಕ) ಇತ್ತೀಚೆಗೆ ನಗರ ಪಾಲಿಕೆಯು ಹೊರಗಿನ ಜನ ಸಂದಣಿಯನ್ನು ಆಕರ್ಷಿಸುತ್ತಿರುವ ಹಿನ್ನೆಲೆಯಲ್ಲಿ ಹಾಗೂ ನಗರದಲ್ಲಿ ಹೆಚ್ಚುತ್ತಿರುವ ವಾಹನ ಸೌಕರ್ಯಗಳಿಗೆಂದು ಅನುಕೂಲ ಮಾಡಿಕೊಡುವ ಸಲುವಾಗಿ ಅನೇಕ ವಿಧವಾದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ ಮಹಾನಗರ ಪಾಲಿಕೆಯು ಗಣಪತಿ ಗಲ್ಲಿಯ ರಸ್ತೆ ವಿಸ್ತರಣಾ ಕಾರ್ಯಕ್ರಮವನ್ನು ಸಹ ಯೋಜಿಸಿದೆ. ಅದರ ಪ್ರಯುಕ್ತ ಹೊಸದಾದ ಹಾಗೂ ವಿಶಾಲವಾದ ರಸ್ತೆಗಳ ನಿರ್ಮಾಣ ಕಾರ್ಯವನ್ನು ಈ ಪಾಲಿಕೆ ಹಮ್ಮಿಕೊಂಡಿದೆ.

5) <u>ಪುನರ್ವಸತಿ ಕಾರ್ಯಕ್ರಮ:</u>

ಈ ಹೊಸ ಯೋಜನೆಗಳಿಂದಾಗಿ ಮನೆ ಮಾಲೀಕರ ಸಂಕಷ್ಟವನ್ನು ನಿವಾರಿಸುವ ಸಲುವಾಗಿ ಪುನರ್ವಸತಿಗಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು 'ಶಿವಾಜಿ' ಬಳಿ ಮನೆ ಸೌಕರ್ಯವನ್ನು ಕಲ್ಪಿಸಿದೆ.

## 7.8 ಗುಲ್ಬರ್ಗಾ ಮಹಾನಗರ ಪಾಲಿಕೆ

1 ಗುಲ್ಬರ್ಗಾ ಮಹಾನಗರ ಪಾಲಿಕೆಯು ಅಕ್ಟೋಬರ 1981ರಲ್ಲಿ ಅಸ್ತಿತ್ವಕ್ಕೆ ಬಂದಿತು. 1991ನೇ ಜನಗಣತಿ ಪ್ರಕಾರ ಮಹಾನಗರ ಪಾಲಿಕೆಯ ಜನಸಂಖ್ಯೆಯು 3.04 ಲಕ್ಷ ಆಗಿದ್ದು ವಿಸ್ತೀರ್ಣವು 28.70 ಚ.ಕಿ.ಮೀ. ಆಗಿರುತ್ತದೆ. ಮಹಾನಗರ ಪಾಲಿಕೆಯು ಗುಲ್ಬರ್ಗಾ ವಿಭಾಗದ ಕೇಂದ್ರ ಸ್ಥಾನವಾಗಿರುತ್ತದೆ. ಗುಲ್ಬರ್ಗಾ ಮಹಾನಗರ ಪಾಲಿಕೆಯಲ್ಲಿ 51 ಜನ ಪೌರ ಸದಸ್ಯತ್ವವಿದ್ದು ಇವುಗಳಲ್ಲಿ 5 ಮಂದಿ ಪ್ರತಿನಿಧಿತ್ವ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರೂ ಮತ್ತು 10 ಮಂದಿ ಮಹಿಳೆಯರಿಗೆ ಮೀಸಲಾತಿಯಿಂದ ಕೂಡಿರುತ್ತದೆ. 1994–95ನೇ ಸಾಲಿಗೆ ವಾರ್ಷಿಕ ಆದಾಯವು ರೂ 1862.06 ಲಕ್ಷಗಳಾಗಿರುತ್ತದೆ. ಈ ಆದಾಯವು ಪ್ರಮುಖವಾಗಿ ತೆರಿಗೆ, ಆಸ್ತಿ ತೆರಿಗೆ ಗ್ರಾಂಟ ಹಾಗೂ ಇತರೆ ತೆರಿಗೆಯಿಂದ ಕೂಡಿರುತ್ತದೆ. ವಾರ್ಷಿಕ ಬೇಡಿಕೆಯನ್ವಯ ಮಹಾನಗರ ಪಾಲಿಕೆಯು ಶೇಕಡ 32ರಷ್ಟು ಹಣ ವಸೂಲಾತಿಯನ್ನು ಮಾಡಿರುತ್ತದೆ.

2 <u>ಬೇಡಿಕೆ, ವಸೂಲಾತಿ ಮತ್ತು ಬಾಕಿ</u>

| | | |
|---|---|---|
| ಬೇಡಿಕೆ | : ರೂ | 207.15 ಲಕ್ಷ |
| ವಸೂಲಿ | : ರೂ | 66.59 ಲಕ್ಷ |
| ಬಾಕಿ | ರೂ | 140.56 ಲಕ್ಷ |

3 ಮಹಾನಗರ ಪಾಲಿಕೆಯು ಈ ಕೆಳಕಂಡ ಮೂಲಗಳನ್ನು ಸೇರಿದಂತೆ ಒಟ್ಟು 197.07 ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿರುತ್ತದೆ. ಇದಲ್ಲದೆ ಮುನಿಸಿಪಲ್ ಆಸ್ತಿಗಳಿಂದ ರೂ 60.40 ಲಕ್ಷ ಹಣ ಸಂಗ್ರಹ ಆಗುವ ನಿರೀಕ್ಷೆಯಿದೆ.

| | |
|---|---|
| ಅ) ವಾಚನಾಲಯ ಶುಲ್ಕ | ಶೇಕಡ 3 |
| ಆ) ಆರೋಗ್ಯ ತೆರಿಗೆ | ಶೇಕಡ 15 |
| ಇ) ಶಿಕ್ಷಣ ತೆರಿಗೆ | ಶೇಕಡ 10 |
| ಈ ಭಿಕ್ಷಾಟನಾ ತೆರಿಗೆ | ಶೇಕಡ 3 |

4 ಶೇಕಡ 18ರ ಆಯವ್ಯಯದಲ್ಲಿ ಮಹಾನಗರ ಪಾಲಿಕೆಯು 36.15 ಲಕ್ಷ ರೂಗಳನ್ನು ಮೀಸಲಾಗಿರಿಸಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರ ಏಳಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಇವುಗಳಲ್ಲಿ ಪ್ರಮುಖವಾಗಿ ಇನ್ಫ್ರಾಸ್ಟ್ರಕ್ಚರ್, ಕುಡಿಯುವ ನೀರು, ಶೌಚಾಲಯ ಮುಂತಾದವು ಪ್ರಸ್ತುತ ಸಾಲಿನಲ್ಲಿ 37 ಕಾರ್ಯಕ್ರಮಗಳನ್ನು ಪೂರ್ಣಗೊಳಿಸಿ ಇನ್ನೂ 8 ಕಾರ್ಯಕ್ರಮಗಳು ಚಾಲ್ತಿಯಲ್ಲಿರುತ್ತವೆ.

## 5 ಅಭಿವೃದ್ಧಿ ಕಾರ್ಯಕ್ರಮಗಳು

1994–95ನೇ ಸಾಲಿನಲ್ಲಿ ಶಹಾನಗರ ಸಭೆಯು ಈ ಕೆಳಕಂಡ ಕೆಲಸಗಳನ್ನು ಕೈಗೊಂಡಿದೆ.

1994–95ನೇ ಸಾಲಿಗೆ ಅಭಿವೃದ್ಧಿ ಕೆಲಸಗಳು
(ಡಿಸೆಂಬರ್ 94ರ ಅಂತ್ಯದವರೆಗೆ)

| ಸಂಖ್ಯೆ | ವಿವರ | ಆರ್ಥಿಕ ಪ್ರಗತಿ | ಭೌತಿಕ ಪ್ರಗತಿ |
|---|---|---|---|
| 1) | ಮೆಟಲ್ ರಸ್ತೆ | 4.55 | 3.12 ಕಿ.ಮೀ. |
| | 1) ಮಂಜೂರ | | |
| | 2) ಪೂರ್ಣ | 4.74 | 8.56 |
| 2) | ಡಾಂಬರ್ ರಸ್ತೆ | | |
| | 1) ಮಂಜೂರ | 2.16 | 2.91 |
| | 2) ಪೂರ್ಣ | 5.73 | 8.68 |
| 3) | ಶಹಾಬಾದ್ ಕಲ್ಲಿನ ಹಾಸಿಗೆ | | |
| | 1) ಮಂಜೂರ | 0.58 | 976 ಚ.ಮೀ. |
| | 2) ಪೂರ್ಣ | 0.52 | 1553 |
| 4) | ಡ್ರೇನ್<br>ಮೇಸನರಿ ಮತ್ತು ಸೆಕ್ಷನ್ 1 | 2.77 | 1387 ಆರ್.ಎಂ.ಟಿ. |
| 5) | ಕಟ್ಟಡಗಳು | | |
| | 1) ಮಂಜೂರ ಕಟ್ಟಡ | 1.68 | 1) ಶೌಚಾಲಯ<br>4) ಸಮುದಾಯ ಭವನ ಕೆಲಸ ಪ್ರಗತಿ |
| | 2) ಪೂರ್ಣ ಮತ್ತು ನಿರ್ವಹಣೆ | 1.70 | 1) ಕಾಂಪೌಂಡ್ ಗೋಡೆ ನಿರ್ಮಾಣ ಮುಕ್ತಾಯ<br>7) ವೈಯಕ್ತಿಕ ಗೃಹ ಶೌಚಾಲಯ ಕಟ್ಟಡ ಮುಕ್ತಾಯ.<br>28) ಹಾಲಿ ಸಮುದಾಯ ಭವನಗಳ ಪೂರ್ಣ ಕೆಲಸ ಮುಕ್ತಾಯ<br>2) ಕಟ್ಟಡಗಳು<br>1) ಸಾರ್ವಜನಿಕ ಶೌಚಾಲಯ ಪೂರ್ಣ ಕೆಲಸ ಮುಕ್ತಾಯ. |
| 6) | ಎಮ್.ಪಿ. ಸ್ಲ್ಯಾಬ್ ಕ್ರಾಸಿಂಗ್ ಮತ್ತು ಕಲ್ವರ್ಟ್ | | 49) ಕಲ್ವರ್ಟಗಳು 18 ಸ್ಲ್ಯಾಬ್ ಕ್ರಾಸಿಂಗ್ |
| 7) | ಇತರ ಸಾಮಾನ್ಯ ಕೆಲಸಗಳು | 0.50 | |

6 <u>ವಾಣಿಜ್ಯ ಸಂಕೀರ್ಣ ನಿರ್ಮಾಣದ ಬಗ್ಗೆ ಸಂಕ್ಷಿಪ್ತ ವರದಿ</u>

ಗುಲ್ಬರ್ಗಾ ಮಹಾನಗರ ಪಾಲಿಕೆಯು ತನ್ನ ಆದಾಯವನ್ನು ಹೆಚ್ಚಿಸುವ ಉದ್ದೇಶದಿಂದ ಖಾಸಗಿ ಕ್ಷೇತ್ರಕ್ಕೆ ಅನ್ವಯಿಸುವಂತೆ ಸ್ವಂತ ಹಣ ಅಳವಡಿಸಿಕೊಂಡು ಕಾರ್ಯಕ್ರಮವನ್ನು ಜಾರಿಗೊಳಿಸಬಹುದಾದಂತಹ ಮೂಲಗಳಿಂದ ಅಂಗಡಿ ಮಳಿಗೆಗಳ ನಿರ್ಮಾಣ ಕಾರ್ಯಕ್ರಮವನ್ನು ಯೋಜಿಸಿದೆ.

(ಅ) ಅಂತಹವುಗಳಲ್ಲಿ ಒಂದಾದದ್ದು, ಆಸಿಫ್ ಗಂಜ್ ಬಳಿಯ ಮಳಿ ತರಕಾರಿ ಮಾರುಕಟ್ಟೆಯ ಅಂಗಡಿಗಳಲ್ಲಿ ನಿರ್ಮಿಸಬಹುದಾದ ಅಂಗಡಿ ಮಳಿಗೆಗಳು ಇದರ ಒಟ್ಟು ಅಂದಾಜು ವೆಚ್ಚ ರೂ.87.00 ಲಕ್ಷ. ಈಗಾಗಲೇ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ದೊರೆತಿದ್ದು ತಾಂತ್ರಿಕ ಮಂಜೂರಾತಿಯನ್ನು ಸಹ ಪಡೆದಿದೆ.

ಈ ಯೋಜನೆಯ ಪ್ರಕಾರ ನೆಲ ಮಳಿಗೆಯಲ್ಲಿ 104 ಅಂಗಡಿಗಳನ್ನು 14,700 ಚ.ಅಡಿ ವಿಸ್ತೀರ್ಣದಲ್ಲಿ ನೆಲ ಮಳಿಗೆಯಲ್ಲಿ 12,976 ಚ.ಅಡಿ ವಿಸ್ತೀರ್ಣದ ಜಾಗದಲ್ಲಿ 84 ಅಂಗಡಿಗಳನ್ನು ಹಾಗೂ ಮೊದಲನೇ ಮಹಡಿಯಲ್ಲಿ 11,447 ಚ.ಅಡಿ ಜಾಗದಲ್ಲಿ 10 ಮಳಿಗೆಗಳನ್ನು ನಿರ್ಮಿಸುವ ಕಾರ್ಯಕ್ರಮವಿರುತ್ತದೆ. ಬಹುಶಃ ಮಾರ್ಚ್ 1995ರಲ್ಲಿ ಪೂರ್ಣಗೊಳ್ಳುವ ನಿರೀಕ್ಷೆ ಇದೆ.

ಆ) ಮೊಂಡ ಮಾರುಕಟ್ಟೆ ಸುತ್ತಲಿನ ಪ್ರದೇಶದಲ್ಲಿ ಮಳಿಗೆಗಳನ್ನು ನಿರ್ಮಿಸುವ ಮತ್ತೊಂದು ಯೋಜನೆಯನ್ನು ಮಹಾನಗರ ಪಾಲಿಕೆಯು ಹಾಕಿಕೊಂಡಿದ್ದು ಇದರಿಂದ ಸುಮಾರು 11.5 ಲಕ್ಷ ವರಮಾನ ಬರುವುದೆಂದು ನಿರೀಕ್ಷಿಸಿದೆ.

ಇ) ಆಶ್ರಯ ಯೋಜನೆಯಡಿಯಲ್ಲಿ ನಗರ ಪಾಲಿಕೆಯು ಶೇಕರೋಜ ಗ್ರಾಮದ ಸರ್ವೆ ನಂ.18ರಲ್ಲಿ 22 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿದೆ.

ಈ) ಯು.ಬಿ.ಎಸ್.ಪಿ. ಯೋಜನೆಯಡಿಯಲ್ಲಿ ಗುಲ್ಬರ್ಗಾ ಮಹಾನಗರ ಪಾಲಿಕೆಯನ್ನು ಮಾದರಿ ನಗರ ಎಂದು ಪರಿಗಣಿಸಲಾಗಿದೆ.

## 7.9 ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ

1 ಮಹಾನಗರ ಪಾಲಿಕೆಗಳ ಪೈಕಿ ಬೆಂಗಳೂರು ಮಹಾನಗರ ಪಾಲಿಕೆ ಬಿಟ್ಟರೆ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು 2ನೇ ದೊಡ್ಡ ಮಹಾನಗರ ಪಾಲಿಕೆ ಆಗಿರುತ್ತದೆ. ಇದರ ಒಟ್ಟು ವಿಸ್ತೀರ್ಣ 183.32 ಚ.ಕಿ.ಮೀ. ಆಗಿದ್ದು 1991ರ ಜನಗಣತಿಯ ಪ್ರಕಾರ ಇದರ ಜನಸಂಖ್ಯೆ 6.48 ಲಕ್ಷಗಳಾಗಿರುತ್ತದೆ. ಮಹಾನಗರ ಪಾಲಿಕೆಯಲ್ಲಿ 57 ಕಾರ್ಪೋರೇಷನ ವಿಭಾಗಗಳಿರುತ್ತವೆ 3 ವಿಧಾನ ಸಭಾ ಕ್ಷೇತ್ರಗಳಿರುತ್ತವೆ. (1) ಧಾರವಾಡ ವಿಧಾನ ಸಭಾ (2) ಹುಬ್ಬಳ್ಳಿ ವಿಧಾನ ಸಭಾ (3) ಹುಬ್ಬಳ್ಳಿ ಗ್ರಾಮಾಂತರ ವಿಧಾನ ಸಭಾ.

2 ಮಹಾನಗರ ಪಾಲಿಕೆಯ ಆದಾಯ ರೂ.1300.34 ಲಕ್ಷಗಳಾಗಿರುತ್ತದೆ. ಪ್ರಸ್ತುತ ಸಾಲಿನ ಕರ ವಸೂಲಾತಿಯು ಶೇಕಡ 42ರಷ್ಟು ಇರುತ್ತದೆ.

3 ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರ ಏಳಿಗೆಗಾಗಿ ಶೇಕಡ 18ರ ಅನುದಾನದಲ್ಲಿ ಡಿಸೆಂಬರ 1993ರ ಅಂತ್ಯದವರೆಗೆ ರೂ.9.61 ಲಕ್ಷ ವೆಚ್ಚವನ್ನು ಮಾಡಲಾಗಿರುತ್ತದೆ.

4 ಅಭಿವೃದ್ಧಿ ಕಾರ್ಯಕ್ರಮಗಳು:- 1994-95ನೇ ಸಾಲಿಗೆ ನಾಗರೀಕ ಸೌಲಭ್ಯ ಕಲ್ಪಿಸಿಕೊಡುವ ದಿಸೆಯಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಶೀರ್ಷಿಕೆಯ ಹೆಸರು | ಭೌತಿಕ ಪ್ರಗತಿ | ಆರ್ಥಿಕ ಪ್ರಗತಿ |
|---|---|---|---|
| 1. | ಖಡಿ ರಸ್ತೆ ಮಾಡುವದು | 5.22 ಕಿ.ಮೀ. | 18.99 ಲಕ್ಷ |
| 2. | ಡಾಂಬರ ರಸ್ತೆ ಮಾಡುವದು | 27.54 ಕಿ.ಮೀ. | 82.89 ಲಕ್ಷ |
| 3. | ಒಳಚರಂಡಿ ಕೊಳವೆ ಹಾಕುವದು | 3.65 ಕಿ.ಮೀ. | 9.50 ಲಕ್ಷ |
| 4. | ತೆರೆದ ಚರಂಡಿ ಕಟ್ಟುವದು | 4.56 ಕಿ.ಮೀ. | 27.43 ಲಕ್ಷ |
| 5. | ನೀರು ಸರಬರಾಜು | — | 17.47 ಲಕ್ಷ |
| 6. | ಬೀದಿ ದೀಪಗಳು | — | 36.55 ಲಕ್ಷ |
| | | ಒಟ್ಟು | 192.83 ಲಕ್ಷ |

5 ಇದಲ್ಲದೆ ಇನ್ನು 8 ಯೋಜನಾ ಕಾರ್ಯಕ್ರಮಗಳಿಗೆ ಪ್ರಸ್ತಾವನೆಯನ್ನು ರೂಪಿಸಿ ಕಾರ್ಯಗತಗೊಳಿಸುವ ಯೋಜನೆಯನ್ನು ಹಾಕಿಕೊಂಡಿದೆ. ಆ ಪ್ರಸ್ತಾವನೆಗಳ ಪೈಕಿ ಮಾರುಕಟ್ಟೆಗಳ ಸಂಕೀರ್ಣ ನಿರ್ಮಾಣ, ಸಮಾಜ ಮಂದಿರಗಳು ಮತ್ತು ವಾಣಿಜ್ಯ ಸಂಕೀರ್ಣ ಹಾಗೂ ಶಾಲಾ ಕಟ್ಟಡಗಳು, ಶೌಚಾಲಯ ನಿರ್ಮಾಣ ಕಾರ್ಯಕ್ರಮದಲ್ಲಿ ಮಹಾನಗರ ಪಾಲಿಕೆಯು ಈ ಎರಡೂ ನಗರಗಳು ಸೇರಿದಂತೆ ಹಾಕಿಕೊಂಡ ಕಾರ್ಯಕ್ರಮ ಈ ಕೆಳಗೆ ನಮೂದಿಸಿದೆ.

| | ಹುಬ್ಬಳ್ಳಿ | ಧಾರವಾಡ |
|---|---|---|
| 1) ಸಾರ್ವಜನಿಕ ಪಾಯಖಾನೆಗಳು. | 144 ಬ್ಲಾಕಗಳು | 73 ಬ್ಲಾಕಗಳು |
| 2) ಸಾರ್ವಜನಿಕ ಮೂತ್ರಾಲಯಗಳು. | 76 ಬ್ಲಾಕಗಳು | 32 ಬ್ಲಾಕಗಳು |

6. ವರದಿ ವರ್ಷದಲ್ಲಿ ಸಾಂಕ್ರಾಮಿಕ ರೋಗಗಳು ಹರಡದಂತೆ ಹಾಗೂ ಚಳಿಜ್ವರ ನಿಯಂತ್ರಿಸಲು ನೀರು ನಿಲ್ಲುವ ಜಾಗೆಗಳಲ್ಲಿ ಕೀಟ ನಾಶಕಗಳನ್ನು ಸಿಂಪಡಿಸುವುದು ಮತ್ತು ಮುಂಜಾಗ್ರತೆ ಕ್ರಮಗಳನ್ನು ಕೈಗೊಳ್ಳಲಾಗಿದೆ. ಅಲ್ಲದೇ 3660 ಬೀದಿ ನಾಯಿಗಳನ್ನು ಸಹ ಸಾರ್ವಜನಿಕರಿಗೆ ತೊಂದರೆಯಾಗ ಬಾರದೆಂಬ ದೃಷ್ಟಿಯಿಂದ ನಾಶಪಡಿಸಲಾಗಿದೆ.

7. ಆಶ್ರಯ ಯೋಜನೆ

ನಗರ ಪಾಲಿಕೆಯು 2114 ನಿವೇಶನಗಳ ತಯಾರಿಸುವುದರಲ್ಲಿ ಸಂಬಂಧಿಸಿದ್ದು ಈ ನಿವೇಶನಗಳಿಗೆ 79.09 ಎಕರೆ ಜಮೀನನ್ನು ಸ್ವಾಧೀನ ಪಡಿಸಿಕೊಂಡಿರುತ್ತದೆ. ಇದಕ್ಕೆ ಸಂಬಂಧಿಸಿದ ವಿವರಗಳನ್ನು ಈ ಕೆಳಗಿನ ತಃಖ್ತೆಯಲ್ಲಿ ವಿವರಿಸಲಾಗಿದೆ.

| ವಿಧಾನ ಸಭಾ ಕ್ಷೇತ್ರ. | ಸ್ವಾಧೀನ ಪಡಿಸಿಕೊಂಡ ಜಮೀನಿನ ಕ್ಷೇತ್ರ | | ತಯಾರಾದ ನಿವೇಶನಗಳ ಸಂಖ್ಯೆ |
|---|---|---|---|
| | ಎಕರೆ | ಗುಂಟೆ | |
| 175(ಧಾರವಾಡ ಶಹರ) | 53 | 39 | 1347 |
| 176(ಹುಬ್ಬಳ್ಳಿ ಶಹರ) | 11 | 10 | 245 |
| 177(ಹುಬ್ಬಳ್ಳಿ ಗ್ರಾಮೀಣ) | 16 | — | 552 |

8. ನೆಹರು ರೋಜಗಾರ ಯೋಜನೆ

ನೆಹರು ರೋಜಗಾರ ಯೋಜನೆಯಡಿಯಲ್ಲಿ ಮಹಾ ನಗರ ಪಾಲಿಕೆಯ ಪ್ರಗತಿಯು ಈ ಕೆಳಗಿನಂತಿರುತ್ತದೆ.

<u>ನೆಹರು ರೋಜಗಾರ ಯೋಜನೆ</u> (ಅ) <u>ಸಣ್ಣ ಉದ್ದಿಮೆ ಸ್ಥಾಪಿಸುವುದು</u>

ಸ್ವೀಕೃತ ಅನುದಾನ : ರೂ. 30.42 ಲಕ್ಷ

1) ಬ್ಯಾಂಕುಗಳಿಗೆ ಶಿಫಾರಸ್ಸು ಮಾಡಲಾದ ಅರ್ಜಿಗಳ ಸಂಖ್ಯೆ : 181
2) ಬ್ಯಾಂಕುಗಳು ಆಯ್ಕೆ ಮಾಡಿದ ಅರ್ಹ ಫಲಾನುಭವಿಗಳ ಸಂಖ್ಯೆ. : 58
3) ಬ್ಯಾಂಕುಗಳಲ್ಲಿ ಇನ್ನೂ ಬಾಕಿ ಉಳಿದ ಅರ್ಜಿಗಳ ಸಂಖ್ಯೆ. : 80
4) ಮಂಜೂರಾದ ಸಾಲದ ಮೊತ್ತ : ರೂ.8.45 ಲಕ್ಷ
5) ಸಬ್ಸಿಡಿ ನೀಡಿದ ಹಣದ ಮೊತ್ತ : ರೂ.0.38 ಲಕ್ಷ

## 7.10 ಮಂಗಳೂರು ಮಹಾನಗರ ಪಾಲಿಕೆ

1 ಮಂಗಳೂರು ಮಹಾನಗರ ಪಾಲಿಕೆಯು 1980ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು 'ಪಣವು' ಬಾನ ಮುನಿಸಿಪಾಲಿಟಿಯೂ ಸೇರಿದಂತೆ 1983ರಲ್ಲಿ ತನ್ನ ಕ್ಷೇತ್ರವನ್ನು ವಿಸ್ತರಿಸಿಕೊಂಡಿತು. ಈಗಿನ ವಿಸ್ತೀರ್ಣವು 73.63 ಚ.ಕಿ.ಮೀ ಇದ್ದು 1991ರ ಜನಗಣತಿ ಪ್ರಕಾರ ಇದರ ಜನಸಂಖ್ಯೆ 2.80 ಲಕ್ಷದಿಂದ ಕೂಡಿರುತ್ತದೆ. ನಗರ ಪಾಲಿಕೆ ವ್ಯಾಪ್ತಿಯಲ್ಲಿ 3 ವಿಧಾನ ಸಭಾ ಕ್ಷೇತ್ರಗಳಿರುತ್ತವೆ. ಮಂಗಳೂರು, ಉಳ್ಳಾಲ ಮತ್ತು ಸುರತ್ಕಲ್.

2. ಮಂಗಳೂರು ಮಹಾನಗರ ಪಾಲಿಕೆಯ ಆದಾಯವು ರೂ.798.42 ಲಕ್ಷಗಳಾಗಿದ್ದು ಡಿಸೆಂಬರ 1994ರ ಅಂತ್ಯದವರೆಗೆ ರೂ.82.92 ಆಡಳಿತ ಹಾಗೂ ರೂ.483.48 ಲಕ್ಷ ಹಣ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಖರ್ಚು ಮಾಡಲಾಯಿತು. ಇದರೊಂದಿಗೆ ಮಹಾನಗರ ಪಾಲಿಕೆಯು ಶೇಕಡ 78 ರಷ್ಟು ವಸೂಲಾತಿಯನ್ನು ಸಂಗ್ರಹಿಸಿತು.

3. ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರ ಏಳಿಗಾಗಿ ಶೇಕಡ 18ರ ಆಯವ್ಯಯದಲ್ಲಿ ಮಹಾನಗರ ಪಾಲಿಕೆಯು ರೂ.39.42 ಲಕ್ಷ ವೆಚ್ಚದಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಕಾರ್ಯಕ್ರಮಗಳ ಪಟ್ಟಿ ಈ ಕೆಳಗೆ ನಮೂದಿಸಿದಂತಿದೆ:-

| ಕ್ರಮ ಸಂಖ್ಯೆ | ವೆಚ್ಚದ ವಿವರ | ಮಂಜೂರಾದ ಹಣ ರೂ. | ವಾರ್ಷಿಕ ಒಟ್ಟು ವೆಚ್ಚ ರೂ. |
|---|---|---|---|
| 1. | ಎಸ್.ಸಿ:ಎಸ್.ಟಿ.ವಿದ್ಯಾರ್ಥಿಗಳಿಗೆ ಪುಸ್ತಕಗಳ ಖರೀದಿ. | 1,00,000 | 1,71,674.40 |
| 2. | ಸಾರ್ವಜನಿಕ ಕಾಮಗಾರಿಗಳು | | |
| | ಅ) ಹರಿಜನ ಕಾಲೋನಿ ರಸ್ತೆ, ಕಾಲುದಾರಿ, ಚರಂಡಿ, ಭೂಮಿ ಸ್ವಾಧೀನತೆ ಇತ್ಯಾದಿ | 10,90,000 | 11,09,946.00 |
| | ಆ) ಎಸ್‌ಸಿ:ಎಸ್‌ಟಿಗೆ ಪಾಯಿಖಾನೆ ಕೋಣೆಗಳನ್ನು ಕಟ್ಟಿ ಕೊಡುವುದು. | 2,50,000 | 1,67,586.00 |
| | ಇ) ಎಸ್‌ಸಿ:ಎಸ್‌ಟಿ ವರ್ಗದವರ ಮನೆ ಕಟ್ಟುವ ಮರದ ಸಾಮಗ್ರಿ ಒದಗಿಸುವಿಕೆ. | 10,00,000 | 5,87,000.00 |
| | ಈ) ಎಸ್‌ಸಿ:ಎಸ್‌ಟಿ ವರ್ಗದವರ ನೀರಿನ ನಳ್ಳಿ ಜೋಡಣೆ ಕೊಡುವುದು, ನೀರಿನ ಸರಬರಾಜು ಸೌಲಭ್ಯ | 8,00,000 | 11,73,836.00 |
| | ಉ) ಎಸ್‌ಸಿ:ಎಸ್‌ಟಿ ವರ್ಗದವರ ವಿದ್ಯುತ್ ರಹಿತ ಕೋಣೆಗೆ ವಿದ್ಯುದ್ದೀಪಗಳನ್ನು ಅಳವಡಿಸುವುದು ಇತ್ಯಾದಿ. | | |
| 3. | ಕೊಡಿಯಾಲ ಬೈಲ ಸಮಾಜ ಮಂದಿರದ ರಚನೆಗಾಗಿ ಸಹಾಯ ಧನ. | 50,000 | 29,707.00 |

| 1 | 2 | 3 | 4 |
|---|---|---|---|
| 4. | ಚಿಕ್ಕನ ಹೊಗರುವಿನಲ್ಲಿ (ಮಹಾಕಾಳಿ ಪಟ್ಟು ಪೌರ ಕಾರ್ಮಿಕರಿಗೆ ವಸತಿ ಗೃಹ ಕಟ್ಟುವ ಕಾಮಗಾರಿ) | 5,00,000 | 1,30,930.00 |
| 5. | ಬೋಳೂರಿನಲ್ಲಿ ಮೆಟ್ರಿಕ್ ಪೂರ್ವ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ ವರ್ಗದ ವಿದ್ಯಾರ್ಥಿ ನಿಲಯ(1ನೇ ಮಹಡಿ ರಚನೆ) | 50,000 | — |
| 6. | ವೈದ್ಯಕೀಯ ವೆಚ್ಚಕ್ಕಾಗಿ ಸಹಾಯಧನ. | 10,000 | 90,798.25 |
| 7. | ಕುದ್ಮುಲ ರಂಗರಾವ ಭವನ | 10,00,000 | 73,000.00 |
| 8. | ಕದ್ರಿಯಲ್ಲಿ ಪ.ಜಾ:ಪ.ವರ್ಗದವರ ಹುಡುಗರ ಪೋಸ್ಟ್ ಮೆಟ್ರಿಕ್ ಹಾಸ್ಟೆಲ ರಚನೆ. | 50,000 | — |
| 9. | ಸಮಾಜ ಮಂದಿರದ ದೇವಸ್ಥಾನ ರಚನೆಗಳು. | 2,00,000 | 1,70,988.00 |
| 10. | ಪ.ಜಾತಿ:ಪ.ವರ್ಗದವರಿಗೆ ಸಾಹಿತ್ಯ ಹಾಗೂ ಮನೋರಂಜನೆ ಸಾಮಗ್ರಿಗಳನ್ನು ಒದಗಿಸಿ ಕೊಡುವುದು. | 10,000 | 6,733.00 |
| 11. | ನೆಕ್ಕಿಲಗುಡ್ಡೆ ಹರಿಜನ ಕಾಲೋನಿಗೆ ರಸ್ತೆ ರಚನೆ. | 50,000 | — |
| 12. | ಕೊರಗ ಪಂಗಡಕ್ಕೆ ಆಶ್ರಮ ಶಾಲೆಗಾಗಿ ಕೊಠಡಿಗಳ ರಚನೆ. | 1,00,000 | — |
| 13. | ವಿದ್ಯಾರ್ಥಿಗಳಿಗೆ ಸಮವಸ್ತ್ರ ಹಾಗೂ ಪುಸ್ತಗಳ ವಿತರಣೆ. | 3,00,000 | 1,04,225.00<br>1,95,882.00 |
| 14. | ಅಂಗಡಿ ಗುಡ್ಡೆಯಲ್ಲಿ ಸಮಾಜ ಮಂದಿರ ರಚನೆ. | 25,000 | — |
| 15. | ಪಾಂಡೇಶ್ವರದಲ್ಲಿ ಪೌರ ಕಾರ್ಮಿಕರ ಗೃಹಗಳ ರಚನೆ. | 2,00,000 | — |
| 16. | ಮೂಡುಶೆಡ್ಡೆಯಲ್ಲಿ ಪೌರ ಕಾರ್ಮಿಕ ಕಾಲೋನಿ ಅಭಿವೃದ್ಧಿ ಕಾಮಗಾರಿ. | 2,00,000 | — |
| 17. | ಹರಿಜನ:ಗಿರಿಜನ ಸೇವಾ ಸಂಸ್ಥೆಗಳಿಗೆ ಸಹಾಯಧನ. | 1,00,000 | — |
| 18. | ಹರಿಜನ:ಗಿರಿಜನ ಅಭ್ಯರ್ಥಿಗಳಿಗೆ ಕ್ರೀಡೆ ಇತ್ಯಾದಿಗಳಿಗೆ ಪ್ರೋತ್ಸಾಹ ಧನ. | 25,000 | — |
| 19. | ಸರ್ವ ಬಾಬ್ತು | 10,000 | — |

4. <u>ಅಭಿವೃದ್ಧಿ ಕಾರ್ಯಕ್ರಮ</u>:- ಪ್ರಸ್ತುತ ಸಾಲಿನಲ್ಲಿ ಮಹಾನಗರ ಪಾಲಿಕೆಯು (ಕುಡಿಯುವ ನೀರಿನ ಕಾರ್ಯಕ್ರಮ, ಕಟ್ಟಡಗಳ ರಚನೆ ಮುಂತಾದವು) ಒಟ್ಟು ರೂ.483.48 ವೆಚ್ಚದಲ್ಲಿ ಈ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

5. <u>ಆಶ್ರಯ</u>:- ಆಶ್ರಯ ಯೋಜನೆಯಡಿಯಲ್ಲಿ ಮಹಾನಗರ ಪಾಲಿಕೆಯು 314 ಅಭ್ಯರ್ಥಿಗಳಿಗೆ ನಿವೇಶನಗಳನ್ನು ಹಂಚಿದೆ. ಈ ಅಭ್ಯರ್ಥಿಗಳಲ್ಲಿ 194 ಅಭ್ಯರ್ಥಿಗಳು ನಿವೇಶನದ ಹಣವನ್ನು ಭರಿಸಿರುತ್ತಾರೆ. ಅಲ್ಲದೆ 102 ನಿವೇಶನಗಳು ಡಾ:ಅಂಬೇಡ್ಕರ ಶತಮಾನೋತ್ಸವದ ಅಂಗವಾಗಿದ್ದರೆ 212 ನಿವೇಶನಗಳು ಆಶ್ರಯ ಯೋಜನೆಯಡಿಯಲ್ಲಿರುತ್ತದೆ.

ವಸತಿ ಯೋಜನೆಯಡಿಯಲ್ಲಿ ಮಹಾನಗರ ಪಾಲಿಕೆಯು 1169 ಅರ್ಜಿಗಳನ್ನು ಪಡೆದಿದ್ದು 856 ಅರ್ಜಿಗಳ ಬಗ್ಗೆ ಪೂರ್ಣ ಮಾಹಿತಿ ದೊರೆತಿದೆ. ಇವುಗಳಲ್ಲಿ 345 ಅಭ್ಯರ್ಥಿಗಳಿಗೆ ಸಾಲದ ಹಣ ಪಾವತಿ ಮಾಡುವ ವ್ಯವಸ್ಥೆಯನ್ನು ನಗರ ಪಾಲಿಕೆ ಮಾಡಿರುತ್ತದೆ. ಉಳಿದ 511 ಪ್ರಕರಣಗಳಲ್ಲಿ ಡಾಕ್ಯುಮೆಂಟೇಶನ ಕಾರ್ಯ ಜಾರಿಯಲ್ಲಿರುತ್ತದೆ.

6. <u>ಎನ್.ಆರ್.ವೈ</u>:- ಒಟ್ಟು 439 ಅರ್ಜಿಗಳನ್ನು ಸಂಗ್ರಹಿಸಿದ್ದು ಇವುಗಳ ಪೈಕಿ 12 ಅರ್ಜಿಗಳು ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರಾಗಿದ್ದು 190 ಮಹಿಳಾ ಗುಂಪಿನವರಾಗಿದ್ದು ಉಳಿದ 237 ಅರ್ಜಿಗಳು ಸಾಮಾನ್ಯ ವರ್ಗಗಳಿಗೆ ಸಂಬಂಧಿಸಿದಂತಿರುತ್ತದೆ. ಡಿಸೆಂಬರ 94ರ ಅಂತ್ಯದವರೆಗೆ ರೂ.4.18 ಲಕ್ಷ ಸಹಾಯ ಧನವನ್ನು ವಿತರಿಸಿದ್ದು, ಸಾಲದ ಹಣ ನಿರೀಕ್ಷೆಯಲ್ಲಿದೆ. 346 ಅಭ್ಯರ್ಥಿಗಳನ್ನು ಡಿ.ಐ.ಸಿ.ಕೇಂದ್ರದಲ್ಲಿ ತರಬೇತಿಗಾಗಿ ಶಿಫಾರಸ್ಸು ಮಾಡಿದೆ. ರೂ.95,000 ಸಹಾಯ ಧನವನ್ನು ಹಾಗೂ ರೂ.28,500 ಸಾಲ ವಿತರಣೆಯಾಗಿದೆ.

7.11 <u>ಮೈಸೂರು ಮಹಾನಗರ ಪಾಲಿಕೆ</u>

1. 1991ರ ಜನಗಣತಿಯ ಪ್ರಕಾರ ಮೈಸೂರು ಮಹಾನಗರ ಪಾಲಿಕೆಯ ಜನಸಂಖ್ಯೆ 6.06 ಲಕ್ಷವೆಂದು ತಿಳಿದು ಬಂದಿದೆ.

2. <u>ಮಹಾನಗರ ಪಾಲಿಕೆಯ ಆದಾಯ-ವ್ಯಯ 94-95ರ</u>

ಆದಾಯ : ರೂ. 1750.23 ಲಕ್ಷ

ವ್ಯಯ : ರೂ. 1616.06 ಲಕ್ಷ

3. ಇತರೆ, ಮಹಾನಗರ ಪಾಲಿಕೆಗಳಂತೆ ಮೈಸೂರು ನಗರ ಪಾಲಿಕೆಯು ಬೇಡಿಕೆಗೆ ಅನುಗುಣವಾಗಿ ಡಿಸೆಂಬರ 94ರ ಅಂತ್ಯದವರೆಗೆ ಶೇಕಡ 32 ರಷ್ಟು ವಸೂಲಾತಿಯನ್ನು ಮಾಡಿತ್ತು.

ಶೇಕಡ 18ರ ಆಯವ್ಯಯದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಏಳಿಗಾಗಿ ನಗರ ಪಾಲಿಕೆಯು ರೂ.66.53 ಲಕ್ಷ ಹಣವನ್ನು ಖರ್ಚು ಮಾಡಿದೆ. ಇವುಗಳಲ್ಲಿ ಪ್ರಮುಖವಾಗಿ ಕಂಡು ಬರುವವು ಯಾವುವೆಂದರೆ ಭಜನ ಮಂದಿರ, ಭಾಗ್ಯಜಲ ಇತ್ಯಾದಿ.

ಕಾಮಗಾರಿಗಳಿಗೆಂದು : ರೂ. 21.04 ಲಕ್ಷ
ಭಾಗ್ಯಜಲ : ರೂ. 2.67 ಲಕ್ಷ
ಭಾಗ್ಯಜ್ಯೋತಿ : ರೂ. 7.54 ಲಕ್ಷ
ಇತರೇ : ರೂ. 35.28 ಲಕ್ಷ

4. ಆಶ್ರಯ ಯೋಜನೆಯಡಿಯಲ್ಲಿ ಮಹಾನಗರ ಪಾಲಿಕೆಯು ಈ ಕೆಳಕಂಡ ಕಾರ್ಯಕ್ರಮವನ್ನು ಜಾರಿಗೊಳಿಸುವಲ್ಲಿ ಸಫಲತೆಯನ್ನು ಪಡೆದಿದೆ.

| ಕ್ರಮ ಸಂಖ್ಯೆ | ವಿವರಣೆ | ಮಾಹಿತಿಗಳು |
|---|---|---|
| ಅ) | ಭೂ ಸ್ವಾಧೀನ ನಡವಳಿಕೆ | (1) ನರಸಿಂಹರಾಜ ಕ್ಷೇತ್ರ, ಆಶ್ರಯ<br>ಅ) 10 ಎಕರೆ 4 ಗುಂಟೆ ಪ್ರದೇಶವನ್ನು ವಶಪಡಿಸಿ ಬಂಡಿಪಾಳ್ಯ ಗ್ರಾಮದಲ್ಲಿ 13.178 ಲಕ್ಷ ರೂ.ಗೆ ಖರೀದಿಸಲಾಗಿದೆ.<br>20 x 30 ವಿಸ್ತೀರ್ಣದ 1000 ನಿವೇಶನ.<br>(2) ಕೃಷ್ಣರಾಜ ಕ್ಷೇತ್ರ :-<br>26 ಎಕರೆ 19 ಗುಂಟೆ ಪ್ರದೇಶವನ್ನು ಕುಪ್ಪಲೂರು ಗ್ರಾಮದಲ್ಲಿ 28 ಲಕ್ಷ ರೂ. ಗೆ ಖರೀದಿಸಲಾಗಿದೆ.<br>(3) ಚಾಮರಾಜ ಕ್ಷೇತ್ರ :-<br>ಒಟ್ಟು 26 ಎಕರೆ ಭೂ ಪ್ರದೇಶವನ್ನು ರೂ.19.60 ಲಕ್ಷ ವೆಚ್ಚದಲ್ಲಿ ವಶಪಡಿಸಿಕೊಳ್ಳಲಾಗಿದೆ. |

5. ನಿರ್ಮಾಣ ಕಾರ್ಯಕ್ರಮ :-

(ಅ) 1000 ಮನೆಗಳನ್ನು ನಿರ್ಮಿಸಲು ನರಸಿಂಹರಾಜ ಕ್ಷೇತ್ರದಲ್ಲಿ ಕಾರ್ಯಾರಂಭವಾಗಿದೆ. ಇವುಗಳ ಪೈಕಿ 400 ಮನೆಗಳು ರೂಫ್ ಹಂತದಲ್ಲಿದ್ದು 396 ಮನೆಗಳು ಫೌಂಡೇಷನ್ ಹಂತದಲ್ಲಿವೆ. ಉಳಿದ ಮನೆಗಳು ವಿವಿಧ ಹಂತದಲ್ಲಿದೆ.

(ಆ) ಕೃಷ್ಣರಾಜ ಕ್ಷೇತ್ರದಲ್ಲಿ 1000 ಮನೆಗಳ ಕಾರ್ಯಕ್ರಮ ಜಾರಿಯಲ್ಲಿದ್ದು 144 ಮನೆಗಳು ರೂಫ್ ಕಾಸ್ಟ್ ಲೆವಲ್‌ಗೆ ಬಂದಿದ್ದು 100 ಮನೆಗಳು ಲಿಂಟಲ್ ಮತ್ತು 136 ರೂಫ್ ಲೆವಲ್‌ಗೆ ಬಂದಿದೆ.

(ಇ) ಚಾಮರಾಜ ಕ್ಷೇತ್ರದಲ್ಲಿಯೂ ಸಹ 1000 ಮನೆಗಳ ಕಾರ್ಯಕ್ರಮ ಜಾರಿಯಲ್ಲಿದ್ದು 346 ರೂಫ್ ಲೆವಲ್‌ಗೆ ಬಂದಿದ್ದು ಉಳಿದವು ವಿವಿಧ ಹಂತಗಳಲ್ಲಿವೆ.

ಈ ಆಶ್ರಯ ಯೋಜನೆಯ ಅನುಷ್ಠಾನದಲ್ಲಿ ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ ಜನತೆಗೆಂದು 653 ಮನೆಗಳನ್ನು ಮತ್ತು ಹಿಂದುಳಿದ ವರ್ಗದವರಿಗೆಂದು 336 ಮನೆಗಳನ್ನು ಕಾದಿರಿಸಲಾಗಿದೆ.

6. ಎಸ್.ಆರ್.ವೈ: ವಿವಿಧ ಬ್ಯಾಂಕುಗಳ ಶಾಖೆಗಳಿಗೆಂದು ರೂ:46.35 ಲಕ್ಷ ವಿತರಿಸಲಾಗಿದೆ. ಯು.ಎಂ.ಇ. ಕಾರ್ಯಕ್ರಮದಡಿಯಲ್ಲಿ 3016 ಅರ್ಜಿಗಳನ್ನು ಸಂಗ್ರಹಿಸಿದೆ. ಯು.ಬಿ.ಎಸ್.ಪಿ. ಕಾರ್ಯಕ್ರಮದಡಿಯಲ್ಲಿ ನಗರ ಪಾಲಿಕೆಯು ರೂ 5.12 ಲಕ್ಷ ವೆಚ್ಚ ಮಾಡಿದೆ.

## 7.12 ಶಿವಮೊಗ್ಗ–ಭದ್ರಾವತಿ ಮಹಾನಗರ ಪಾಲಿಕೆ

1. ಜುಲೈ 1992ರಲ್ಲಿ ಪ್ರಾರಂಭವಾದ ಶಿವಮೊಗ್ಗ, ಭದ್ರಾವತಿ ಮಹಾನಗರ ಪಾಲಿಕೆಯು ಭೌತಿಕ ವಿಸ್ತೀರ್ಣವು 120 ಚ.ಕಿ.ಮೀ. ಮಹಾನಗರ ಪಾಲಿಕೆಗೆ ಜಿಲ್ಲಾಧಿಕಾರಿಗಳು ಅಡ್ಮಿನಿಸ್ಟ್ರೇಟರ್ ಆಗಿ ಮಹಾ ನಗರ ಪಾಲಿಕೆಯ ಕಾರ್ಯವನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. 1991ರ ಜನಗಣತಿಯ ಪ್ರಕಾರ ಈ ಮಹಾನಗರ ಪಾಲಿಕೆಯ ಜನಸಂಖ್ಯೆ 3,95,123.

2. 1994–95ರ ಆಯವ್ಯಯ

| | |
|---|---|
| ಆದಾಯ | : ರೂ 645.81 ಲಕ್ಷ |
| ವೆಚ್ಚ | : ರೂ 556.09 ಲಕ್ಷ |

3. ಬೇಡಿಕೆ–ವಸೂಲಾತಿ ವಿವರ

| | |
|---|---|
| ಬೇಡಿಕೆ | : ರೂ 260.81 ಲಕ್ಷ |
| ವಸೂಲಿ | : ರೂ 102.98 ಲಕ್ಷ |
| ಬಾಕಿ | : ರೂ 157.83 ಲಕ್ಷ |

4. ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡದವರ ಸುಧಾರಣೆಗಾಗಿ ಆಯವ್ಯಯದಲ್ಲಿ ಶೇಕಡ18ರಷ್ಟು ರೂ.116 ಲಕ್ಷ ನಿಗದಿಪಡಿಸಿದೆ.

5. ಅಭಿವೃದ್ಧಿ ಕಾರ್ಯಕ್ರಮ: 1994–95ರ ಸಾಲಿಗೆ ನಗರ ಪಾಲಿಕೆಯು ಈ ಕೆಳಕಂಡ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

ರಸ್ತೆ ನಿರ್ಮಾಣ, ಒಳ ಚರಂಡಿ, ಕಲ್ವರ್ಟ್ ಬಸ್ ತಂಗು ನಿಲ್ದಾಣಗಳು ಹಾಗೂ ಬೀದಿ ದೀಪಗಳು.

6. ಆಶ್ರಯ ಯೋಜನೆ: ಆಶ್ರಯ ಯೋಜನೆಯಡಿಯಲ್ಲಿ ನಗರ ಪಾಲಿಕೆಯು 124.21 ಎಕರೆ ಜಮೀನನ್ನು ಖರೀದಿಸಿ 3729 ನಿವೇಶನಗಳನ್ನು ಹಂಚುವ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಡಿಸೆಂಬರ್ 1994ರ ವರೆಗೆ 220 ನಿವೇಶನಗಳ ಹಂಚಿಕೆಯಾಗಿದೆ. 1994–95ರ ಸಾಲಿಗೆ 315 ಮನೆಗಳನ್ನು ಕಟ್ಟುವ ಗುರಿ ಹೊಂದಿದ್ದು 88 ಮನೆಗಳು ಪೂರ್ಣಗೊಂಡಿವೆ ಮತ್ತು 9 ಮನೆಗಳು ಪ್ರಗತಿಯಲ್ಲಿವೆ.

7. ಎಸ್.ಆರ್.ವೈ:– ಹಿಂದಿನ ವರ್ಷದ ಬಾಕಿ ಕಾರ್ಯಕ್ರಮವನ್ನು ಜಾರಿಗೊಳಿಸುತ್ತಿದೆ. ಯು.ಎಂ.ಇ. ಯೋಜನೆಯಡಿಯಲ್ಲಿ 458 ಅಭ್ಯರ್ಥಿಗಳಿಗೆ ಸಹಾಯವನ್ನು ಕಲ್ಪಿಸಿದೆ.

## 8. ನಗರ ಭೂ ಪರಿಮಿತಿ

8.1 ನಗರ ಭೂ(ಪರಿಮಿತಿ ಮತ್ತು ನಿಯಮ)ಕಾಯ್ದೆ, 1976ರಲ್ಲಿ ಕರ್ನಾಟಕ ರಾಜ್ಯದ 5 ನಗರ ಸಮುಚ್ಚಯಗಳಲ್ಲಿ ಜಾರಿಗೆ ಬರುವಂತೆ ಅಳವಡಿಸಲಾಗಿದೆ. ಅದರಂತೆ ಬೆಂಗಳೂರು, ಬೆಳಗಾಂ, ಹುಬ್ಬಳ್ಳಿ-ಧಾರವಾಡ, ಮಂಗಳೂರು ಮತ್ತು ಮೈಸೂರು ನಗರಗಳನ್ನು ನಗರ ಸಮುಚ್ಚಯಗಳೆಂದು ಕರೆಯಲಾಗಿದೆ. ಸದರಿ ಕಾಯ್ದೆಯ ಮುಖ್ಯ ಧ್ಯೇಯವೆಂದರೆ ಬೆಲೆ ಬಾಳುವ ನಗರಾಸ್ತಿಗಳು ಕೆಲವೇ ಮಂದಿ ಲಾಭಕೋರರ ಮತ್ತು ಸಟ್ಟಾ ವ್ಯಾಪಾರಿಗಳ ಕೈ ವಶವಾಗುವುದನ್ನು ತಪ್ಪಿಸುವುದರ ಜೊತೆ ನಗರಾಸ್ತಿಯ ಸಮಾನ ಹಂಚಿಕೆಯನ್ನು ಕಾಯ್ದಿರಿಸುವುದು ಅಲ್ಲದೆ ನಿಗದಿಪಡಿಸಿದ ಮಿತಿಗಿಂತ ಹೆಚ್ಚುವರಿಯಾಗಿ ಹೊಂದಿರುವ ಖಾಲಿ ನಗರಾಸ್ತಿಯನ್ನು ಸರ್ಕಾರ ನಗರ ಭೂ (ಪರಿಮಿತಿ ಮತ್ತು ನಿಯಮ)ಕಾಯ್ದೆ ಅನ್ವಯ ಸ್ವಾಧೀನಪಡಿಸಿ ಕೊಳ್ಳುವ ಅವಕಾಶವನ್ನು ಸದರಿ ಕಾಯ್ದೆಯಲ್ಲಿ ಅಳವಡಿಸುವುದು.

8.2 ಮೇಲೆ ವಿವರಿಸಿದ ಮಹಾನಗರ ಸಮುಚ್ಚಯಗಳಲ್ಲಿ ಖಾಲಿ ಜಾಗವನ್ನು ಹೊಂದಲು ವಿಧಿಸಲಾದ ಪರಿಮಿತಿಯ ವಿವರ ಈ ರೀತಿ ಇವೆ:-

| ಕ್ರಮ ಸಂಖ್ಯೆ | ನಗರ ಸಮುಚ್ಚಯದ ಹೆಸರು | ಪರಿಮಿತಿ (ಚದರ ಮೀಟರುಗಳಲ್ಲಿ) |
|---|---|---|
| 1. | ಬೆಂಗಳೂರು | 1,000 |
| 2. | ಬೆಳಗಾಂ | 2,000 |
| 3. | ಹುಬ್ಬಳ್ಳಿ-ಧಾರವಾಡ | 1,500 |
| 4. | ಮಂಗಳೂರು | 2,000 |
| 5. | ಮೈಸೂರು | 1,500 |

8.3 ಸರ್ಕಾರವು ನಗರ ಭೂ(ಪರಿಮಿತಿ ಮತ್ತು ನಿಯಮ) ಕಾಯ್ದೆ 1976ರ ಪರಿಚ್ಛೇದ 20ರ ಅಧಿಕಾರದ ಅನ್ವಯ ಭೂ ಮಾಲೀಕರು ಹೊಂದಿರುವ ಹೆಚ್ಚುವರಿ ಖಾಲಿ ಜಮೀನನ್ನು ವ್ಯವಸಾಯಕ್ಕಾಗಿ, ವಸತಿ ಅಥವಾ ಕೈಗಾರಿಕೆ ಉದ್ದೇಶಕ್ಕಾಗಿ ವಿನಾಯಿತಿ ನೀಡಲಾಗುವುದು ಇಲ್ಲವೇ ಸಾರ್ವಜನಿಕ ಉದ್ದೇಶಕ್ಕಾಗಿ ಪರಿಮಿತಿಗಿಂತ ಹೆಚ್ಚುವರಿ ಖಾಲಿ ಜಾಗ ಹೊಂದಿರುವವರಿಂದ ಸರ್ಕಾರವು ಸ್ವಾಧೀನ ಪಡಿಸಿಕೊಳ್ಳುವುದು. ಈ ರೀತಿ ಸ್ವಾಧೀನ ಪಡಿಸಿಕೊಂಡ ಭೂಮಿಯನ್ನು ಸರ್ಕಾರವು ಸರ್ಕಾರದ ಇಲಾಖೆಗಳು ಹಾಗೂ ಸಾರ್ವಜನಿಕ ಸಂಸ್ಥೆಗಳಿಗೆ ಹಂಚಿಕೆ ಮಾಡಲಾಗುವುದು. ಭೂ ಮಾಲೀಕರು ಕಾಯ್ದೆ 6(1)ರಂತೆ ಘೋಷಿಸಲಾದ ಅರ್ಜಿಗಳ ಮೇಲೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳು ಸೂಕ್ತ ಕ್ರಮ ತೆಗೆದುಕೊಳ್ಳುವರು.

8.4 ಈವರೆಗೆ 34,397 ಭೂ ಮಾಲೀಕರು ರಿಟರ್ನ್ ಸಲ್ಲಿಸಿದ್ದು ಇದರಲ್ಲಿ 24,245 ಅರ್ಜಿಗಳ ವಿಲೇ ಮಾಡಲಾಗಿದೆ. ನಗರ ಭೂ ಪರಿಮಿತಿ ಕಾಯಿದೆ 1976ರ ಕಲಂ 10(3)ರ ಪ್ರಕಾರ ಡಿಸೆಂಬರ್ 1994ರವರೆಗೆ 1814 ಹೆಕ್ಟೇರ್ ಜಮೀನನ್ನು ಭೂ ಸ್ವಾಧೀನಪಡಿಸಿಕೊಳ್ಳಲಾಗಿದ್ದು ಇದರಲ್ಲಿ 975 ಹೆಕ್ಟೇರ್ ಜಮೀನನ್ನು ಭೌತಿಕವಾಗಿ ಸ್ವಾಧೀನ ಪಡಿಸಿಕೊಂಡಿದೆ. ಇದರಲ್ಲಿ 940 ಹೆಕ್ಟೇರ್ ಜಮೀನನ್ನು ಕೇಂದ್ರ ಹಾಗೂ 544 ಹೆಕ್ಟೇರ್ ಜಮೀನನ್ನು ರಾಜ್ಯ ಸರ್ಕಾರಗಳಿಗೆ ವಿತರಿಸಿದೆ. ಈ ಕಾಯಿದೆಯ ಕಲಂ 20ರ ಮೇರೆಗೆ ಡಿಸೆಂಬರ್ 1994ರ ವರೆಗೆ 7686 ಹೆಕ್ಟೇರ್ ಹೆಚ್ಚುವರಿ ಖಾಲಿ ಜಮೀನಿಗೆ ವ್ಯವಸಾಯ, ನರ್ಸರಿ, ವಸತಿ, ಕೈಗಾರಿಕೆ, ಡೈರಿ ಮತ್ತು ಕೋಳಿ ಸಾಕಾಣೆ ಕ್ಷೇತ್ರೀಯ ಸಾಗುವಳಿ ಉದ್ದೇಶಗಳಿಗೆ ವಿನಾಯಿತಿ ನೀಡಲಾಗಿದೆ.

8.5 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ತನ್ನ ಅಧಿಸೂಚನೆ ಸಂಖ್ಯೆ: ಡಿಪಿಎ 8 ಎಲ್‌ಟಿ 91 ದಿನಾಂಕ 20-7-93ರಲ್ಲಿ ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಾವಳಿ, 1977ಕ್ಕೆ ತಿದ್ದುಪಡಿ ಹೊರಡಿಸಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕೆ.ಎಸ್.ಐ.ಐ.ಡಿ.ಸಿ. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಮತ್ತು ಇತರ ಅಭಿವೃದ್ಧಿ ಪ್ರಾಧಿಕಾರಗಳು ಮತ್ತು ಕಿಯೋನಿಕ್ಸ್ ಸಂಸ್ಥೆಗಳು ಹಂಚಿಕೆ ಮಾಡಿರುವ ಭೂಮಿಗಳಿಗೆ ಸಂಬಂಧಿಸಿದಂತೆ ನಗರ ಭೂ (ಪರಿಮಿತಿ ಮತ್ತು ನಿಯಮನ) ಕಾಯಿದೆ 1976ರ ಪರಿಚ್ಛೇದ 20ರ ಅಡಿಯಲ್ಲಿ ವಿನಾಯಿತಿ ನೀಡುವ ಅಧಿಕಾರವನ್ನು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯಿಂದ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ವರ್ಗಾಯಿಸಿದೆ. ಅದರಂತೆ ದಿನಾಂಕ 10-8-93ರಿಂದ ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯಿಂದ ಇಂತಹ ಪ್ರಕರಣಗಳಿಗೆ ಸಂಬಂಧಿಸಿದ ಎಲ್ಲಾ ಕಡತಗಳನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಗೆ ವರ್ಗಾಯಿಸಲಾಗಿದೆ.

## 9. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ

9.1 1976ರಲ್ಲಿ ಕರ್ನಾಟಕ ಅಧಿನಿಯಮ ಸಂಖ್ಯೆ 12ರ ಅನುಸಾರವಾಗಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರಚನೆಯಾಗಿದ್ದು 1976ರಲ್ಲಿ ಅಸ್ತಿತ್ವಕ್ಕೆ ಬಂದಿತು. ಬೆಂಗಳೂರು ಮಹಾನಗರ ಪ್ರದೇಶವನ್ನು ಸಂಯೋಜಿತ ರೀತಿಯಲ್ಲಿ ಅಭಿವೃದ್ಧಿಗೊಳಿಸುವುದು ಹಾಗೂ ಅನಧಿಕೃತವಾಗಿ ಅನಂತರದ ಯೋಜನಾ ಕಾರ್ಯಕ್ರಮವನ್ನು ನಿಯಮಬದ್ಧವಾಗಿ ನಡೆಸಿಕೊಂಡು ಹೋಗುವ ಪ್ರಕ್ರಿಯೆ ಈ ಪ್ರಾಧಿಕಾರದ ಮುಖ್ಯ ಉದ್ದೇಶವಾಗಿರುತ್ತದೆ. ಈ ದಿಸೆಯಲ್ಲಿ ಬೆಂಗಳೂರು ಪ್ರಾಧಿಕಾರಕ್ಕೆ ಸರಹದ್ದಿನಲ್ಲಿರುವ ಖಾಸಗಿ ಆಸ್ತಿಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಮತ್ತು ವಿಲೇವಾರಿ ಮಾಡುವ ಸಂಪೂರ್ಣ ಅಧಿಕಾರವಿರುತ್ತದೆ.

9.2 <u>ಆಡಳಿತಾತ್ಮಕ ರಚನೆ:—</u>

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಡಳಿತಾತ್ಮಕ ರಚನೆಯಲ್ಲಿ ಅಧ್ಯಕ್ಷರ ಕಛೇರಿ ಸೇರದಂತೆ ಭೂ ಸ್ವಾಧೀನ ಶಾಖೆ, ನಗರ ಯೋಜನಾ ಶಾಖೆ, ತಾಂತ್ರಿಕ ಶಾಖೆ, ಹಣಕಾಸಿನ ಶಾಖೆ, ಕಾನೂನು ಶಾಖೆ ಹಾಗೂ ಕಂದಾಯ ಆಡಳಿತ ಶಾಖೆಗಳು ಪ್ರಮುಖವಾಗಿವೆ. ಪ್ರಾಧಿಕಾರದ ಕಾರ್ಯಕ್ಷೇತ್ರದಲ್ಲಿ ಅತ್ಯಂತ ಸಮರ್ಪಕವಾಗಿ ಕಾರ್ಯ ನಿರ್ವಹಿಸಿಕೊಂಡು ಹೋಗಲು ಆಡಳಿತ ಯಂತ್ರ ಸಹಾಯಕವಾಗುತ್ತಿದೆ.

9.3 <u>ಪ್ರಾಧಿಕಾರದ ಕಾರ್ಯಚಟುವಟಿಕೆ:—</u>

ಅ) ಭೂ ಸ್ವಾಧೀನ ಶಾಖೆಯು, ಇಂಜಿನಿಯರಿಂಗ್ ಶಾಖೆಯೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡು ವಿವಿಧ ನಿವೇಶನ ಅಭಿವೃದ್ಧಿ ಯೋಜನೆಗಳಿಗೆ ಅಗತ್ಯವಾದ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವಲ್ಲಿ ತೊಡಗಿರುತ್ತದೆ.

ಆ) ಬೆಂಗಳೂರು ಮಹಾನಗರ ಪ್ರದೇಶಕ್ಕೆ ಸಮಗ್ರ ಅಭಿವೃದ್ಧಿ ಯೋಜನೆಯನ್ನು ನಿರೂಪಿಸಿ ಅದರ ಮೇಲ್ವಿಚಾರಣೆ ನಡೆಸುವುದು, ಬಡಾವಣೆ ಯೋಜನೆಗಳನ್ನು ತಯಾರಿಸಿ ಪ್ರಾಧಿಕಾರದ ಪ್ರಕಾರ್ಯಗಳಲ್ಲಿ ತೊಡಗುವುದು ನಗರ ಯೋಜನಾ ಶಾಖೆಯ ಹೊಣೆಯಾಗಿರುತ್ತದೆ. ಭೂ ಬದಲಾವಣೆ, ಭೂ ಪರಿವರ್ತನೆ, ನಿವೇಶನಗಳ ಖಾತಾ ವಿತರಣೆ ಮುಂತಾದುವು ಈ ಶಾಖೆಯ ಕಾರ್ಯಕ್ರಮಗಳಲ್ಲಿ ಸೇರಿವೆ.

ಇ) ತಾಂತ್ರಿಕ ಶಾಖೆಯು ಬೆಂಗಳೂರು ಮಹಾನಗರಕ್ಕೆ ಅಗತ್ಯವಾದ ನಿವೇಶನಗಳನ್ನು ಹಾಗೂ ಸೌಕರ್ಯಗಳನ್ನು ಒದಗಿಸಿಕೊಡುವ ಕಾರ್ಯಕ್ರಮವನ್ನು ರೂಪಿಸಿ ಕಾರ್ಯಗತಗೊಳಿಸುವುದರಲ್ಲಿ ಪ್ರಮುಖವಾಗಿರುತ್ತದೆ.

ಈ) ಆರ್ಥಿಕ ಶಾಖೆಯು, ಹಣಕಾಸಿನ ವಿಷಯಗಳಲ್ಲಿ ಪ್ರಾಧಿಕಾರಕ್ಕೆ ಸಲಹೆ ನೀಡಿ, ಲೆಕ್ಕಪತ್ರಗಳನ್ನು ಸೂಕ್ತ ರೀತಿಯಲ್ಲಿ ನಿರ್ವಹಿಸಿಕೊಂಡು ಹೋಗುವುದರಲ್ಲಿ ತನ್ನ ಕಾರ್ಯಕ್ಷಮತೆಯನ್ನು ಅವಲಂಬಿಸುತ್ತದೆ.





ಉ) ಪ್ರಾಧಿಕಾರದ ಮುಂದೆ ಬರುವ ವಿವಿಧ ಕಾನೂನು ವಿಷಯಗಳಲ್ಲಿ ಸಲಹೆ ನೀಡುವುದು ಹಾಗೂ ನ್ಯಾಯಾಲಯಗಳಲ್ಲಿನ ವ್ಯಾಜ್ಯಗಳಲ್ಲಿ ಪ್ರಾಧಿಕಾರದ ಹಿತಾಸಕ್ತಿಯನ್ನು ಸಂರಕ್ಷಿಸುವ ಹೊಣೆಗಾರಿಕೆಯನ್ನು ಪಡೆದಿರುತ್ತಾರೆ.

ಊ) ಆಡಳಿತ, ಅಲಾಟ್‌ಮೆಂಟ್ ಮತ್ತು ಕಂದಾಯ ಇಲಾಖೆಯು ಮೇಲೆ ವಿವರಿಸಿದ ಇಲಾಖೆಗಳ ಕಾರ್ಯಕ್ರಮವನ್ನು ಸಮನ್ವಯ ರೀತಿಯಲ್ಲಿ ಜರುಗಿಸಿಕೊಂಡು ಹೋಗುವ ಮಹತ್ವದ ಜವಾಬ್ದಾರಿಯನ್ನು ಹೊಂದಿರುತ್ತದೆ. ಅಲ್ಲದೆ, ಆಸ್ತಿ, ತೆರಿಗೆ, ಅಭಿವೃದ್ಧಿ ಹಣ, ಅಂಗಡಿ:ಮಳಿಗೆಗಳ ಬಾಡಿಗೆಯನ್ನು ವಸೂಲು ಮಾಡುವುದು ಈ ಶಾಖೆಯ ಜವಾಬ್ದಾರಿಯಾಗಿರುತ್ತದೆ.

9.4 <u>ಅಭಿವೃದ್ಧಿ ಕಾರ್ಯಕ್ರಮಗಳು</u>:-

1. ಪ್ರಸ್ತುತ ಸಾಲಿನಲ್ಲಿ ಅಂದರೆ 1994-95ರ ಸಾಲಿಗೆ ಪ್ರಾಧಿಕಾರವು ರೂ.2445 ಲಕ್ಷ ವೆಚ್ಚದಲ್ಲಿ ಬಡಾವಣೆಗಳ ಕಾಮಗಾರಿಗಳನ್ನು ಹಮ್ಮಿಕೊಂಡಿದೆ. ಬಡಾವಣೆಗಳನ್ನು ವಶಪಡಿಸಿಕೊಂಡ ಜಾಗಗಳಲ್ಲಿ ಸ್ಟೆಡ್ ಡ್ರೈನೇಜ್ + ಮೆಟಲಿಂಗ್ ಕಾರ್ಯಕ್ರಮಗಳನ್ನು ಪೂರ್ಣಗೊಳಿಸಿದೆ.

2. ವಸತಿ ಯೋಜನೆಯನ್ನು ಜಾರಿಗೊಳಿಸಿದ್ದು ಪ್ರಸ್ತುತ ಸಾಲಿನಲ್ಲಿ 27 ಎಚ್‌ಐಜಿ:ಎಲ್‌ಐಜಿ ಮನೆಗಳ ಕಾರ್ಯಕ್ರಮವು ಪ್ರಗತಿಯಲ್ಲಿದೆ.

3. ಇದುವರೆಗೆ ಪ್ರಾಧಿಕಾರವು 1534 ನಿವೇಶನಗಳನ್ನು ವಿತರಿಸುವುದರಲ್ಲಿ ಸಫಲವಾಗಿದ್ದು 194 ಪ್ರಕರಣಗಳಲ್ಲಿ ಬದಲಿ ನಿವೇಶನಗಳ ಹಂಚಿಕೆಯನ್ನು ಮಾಡಿದೆ.

4. ಪ್ರಾಧಿಕಾರವು 22 ಸಿ.ಎ.ನಿವೇಶನಗಳ ಅಧಿಸೂಚನೆಯನ್ನು ಹೊರಡಿಸಿದ್ದು ಅವುಗಳ ವಿತರಣೆಯನ್ನು ಸರ್ಕಾರಿ ಹಾಗೂ ಇತರ ಕೇಂದ್ರ ಸಂಸ್ಥೆಗಳಿಗೆ ಮಾಡಿದೆ ಪ್ರಸ್ತುತ ಸಾಲಿನಲ್ಲಿ 9 ಖಾಸಗೀ ಬಡಾವಣೆಗಳನ್ನು ಮಂಜೂರಾತಿ ನೀಡಿ ಪ್ರಾಧಿಕಾರವು ರೂ.6,10,94,732 ಹಣ ಸಂಗ್ರಹಣೆಯನ್ನು ಮಾಡಿದೆ.

5. ಅಲ್ಲದೆ, ಪ್ರಾಧಿಕಾರವು ಕೇಂದ್ರ ಹಾಗೂ ರಾಜ್ಯ ಸರ್ಕಾರ ಕಛೇರಿಗಳಿಗೆಂದು 55 ಸಿ.ಎ.ನಿವೇಶನಗಳ ಹಂಚಿಕೆ ಮಾಡಿದೆ ಇವುಗಳ ಪೈಕಿ ಪ್ರಮುಖ ಕಛೇರಿಗಳೆಂದರೆ, ಕೆ.ಇ.ಬಿ., ಬಿ.ಡಬ್ಲ್ಯು.ಎಸ್.ಎಸ್.ಬಿ., ಟೆಲಿಕಾಂ.

6. ಅರ್ಜಿಗಳನ್ನು ವಿಳಂಬವಿಲ್ಲದೆ ವಿಲೇವಾರಿ ಮಾಡುವ ಉದ್ದೇಶದಿಂದ 1989-90ರಲ್ಲಿ ಪ್ರಾರಂಭಿಸಲ್ಪಟ್ಟ 'ಏಕಗವಾಕ್ಷಿ' ನಿಯೋಗ ವ್ಯವಸ್ಥೆ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿದೆ. ಪ್ರಸ್ತುತ ಮಾಹೆ ಡಿಸೆಂಬರ್ 1994ರ ವರೆಗೆ 183 ವಾಣಿಜ್ಯ ಲೈಸೆನ್ಸ್ ದೊರಕಿಸಿಕೊಟ್ಟಿದ್ದು ರೂ.2,96,967 ಹಣ ಸಂಗ್ರಹಣೆ ಮಾಡಿದೆ. 57 ಪ್ರಕರಣಗಳಲ್ಲಿ ದೈಪರೇಶನ್ ನೀಡಿ ಕಡತ ವಿಲೇವಾರಿ ಮಾಡಿದೆ.

ರೂ.100.00 ಕೋಟಿ ವೆಚ್ಚದಲ್ಲಿ ಕೊಳಚೆ ಪ್ರದೇಶಗಳಲ್ಲಿ ಸಮಗ್ರ ಅಭಿವೃದ್ಧಿ ಯೋಜನಾ ಕಾರ್ಯಕ್ರಮವನ್ನು ಪ್ರಾಧಿಕಾರ ಹಾಕಿಕೊಂಡಿದೆ. ದೇವರ ಜೀವನ ಹಳ್ಳಿಯ ಕೊಳಚೆ ಪ್ರದೇಶವನ್ನು ಸುಧಾರಿಸುವ ಸಲುವಾಗಿ ಕರ್ನಾಟಕ ಸರ್ಕಾರವು ರೂ.50.00 ಲಕ್ಷ ಹಣವನ್ನು ನೀಡಿತ್ತು.

## 10. ಬೆಂಗಳೂರು ನಗರ ಕಲಾ ಆಯೋಗ

10.1 ಬೆಂಗಳೂರು ನಗರ ಕಲಾ ಆಯೋಗವು ಒಂದು ಶಾಸನಬದ್ಧ ಸಂಸ್ಥೆಯಾಗಿದ್ದು ಅದನ್ನು ಸರ್ಕಾರ ಬಿ.ಡಿ.ಎ.ಅಧಿನಿಯಮ 1976ರ ಮೇರೆಗೆ ನಗರದ ಶೀಘ್ರಗತಿಯ ಬೆಳವಣಿಗೆಯು ನಗರದ ಸೌಂದರ್ಯ, ವಾಸ್ತುಶಿಲ್ಪ ಮತ್ತು ಪರಿಸರಕ್ಕೆ ಪ್ರತಿಕೂಲ ಪರಿಣಾಮ ಬೀರದಂತಿರುವುದನ್ನು ಖಾತರಿ ಮಾಡಿಕೊಳ್ಳುವ ಉದ್ದೇಶಕ್ಕಾಗಿ ಸ್ಥಾಪಿಸಲಾಗಿದೆ. ಆಯೋಗವು ಈ ಅಂಶಗಳನ್ನು ಬೆಂಗಳೂರಿನ ನಿವಾಸಿಗಳಿಗೆ ಒಂದು "ಶುದ್ಧ ಮತ್ತು ಹಚ್ಚ ಹಸುರಿನ" ಜೀವನ ಗುಣಧರ್ಮವಿರುವುದಕ್ಕೆ ಪ್ರಮುಖ ಕೊಡುಗೆಗಳೆಂದು ಪರಿಗಣಿಸುತ್ತದೆ.

10.2 ಈ ಆಯೋಗವು ಬೆಂಗಳೂರು ನಗರ ನಿಗಮ ಮತ್ತು ಇತರ ಸಂಬಂಧಪಟ್ಟ ಸಂಸ್ಥೆಗಳಿಂದ ಪ್ರಮುಖ ಪ್ರದೇಶಗಳು ಮತ್ತು ಪ್ರಮುಖ ಬೀದಿಗಳು ಮುಂತಾದವುಗಳಲ್ಲಿ ಕಟ್ಟಡಗಳ ನಿರ್ಮಾಣ ಮತ್ತು ಇತರ ಅಭಿವೃದ್ಧಿ ಯೋಜನೆಗಳಿಗೆ ಪ್ರಸ್ತಾವನೆಗಳನ್ನು ಮಂಜೂರಾತಿಗಾಗಿ ಸ್ವೀಕರಿಸುತ್ತದೆ. ಪ್ರಸ್ತುತ ಸಾಲಿನಲ್ಲಿ ಆಯೋಗವು 53 ಪ್ರಕರಣಗಳ ಪ್ರಸ್ತಾವನೆಯನ್ನು ಪರಿಶೀಲನೆಗೆ ಸ್ವೀಕರಿಸಿತ್ತು.

10.3 ಆಯೋಗವು ಬೆಂಗಳೂರು ನಗರದಾದ್ಯಂತ ಹಬ್ಬಿಕೊಂಡಿರುವ ಜಾಹೀರಾತು ಫಲಕಗಳ ನಿವೇಶನ ಮತ್ತು ಸ್ಥಳಗಳ ವಿವರವಾದ ಪರಿಶೀಲನೆಯನ್ನು ತಾನೇ ಸ್ವತಃ ಕೈಗೊಂಡಿದೆ. ಅಂತಹ ಜಾಹೀರಾತು ಫಲಕಗಳು ಕೆಲವು ಸಂದರ್ಭಗಳಲ್ಲಿ ವಾಹನ ಸಂಚಾರಕ್ಕೆ ಅಪಾಯವನ್ನುಂಟು ಮಾಡುವುದಲ್ಲದೆ, ನಗರದ ಸೌಂದರ್ಯದ ಮೇಲೆ ತೀವ್ರ ಪ್ರಭಾವ ಬೀರುವುದು. ಹಲವಾರು ಹೊಸ ಜಾಹೀರಾತು ಫಲಕಗಳನ್ನು ಸಮುಚಿತ ಲೈಸೆನ್ಸ್ ಪಡೆಯದೆ ಹಾಕಲಾಗಿದೆ ಎಂಬುದನ್ನು ಆಯೋಗವು ಗಮನಿಸಿದೆ. ಬೆಂಗಳೂರಿನ ಸೌಂದರ್ಯವನ್ನು ಹೆಚ್ಚಿಸುವುದನ್ನು ಪರಿಶೀಲಿಸಲು ರಾಜ್ಯ ಸರ್ಕಾರದಿಂದ ರಚಿಸಲಾದ ಉನ್ನತಾಧಿಕಾರ ಸಮಿತಿ ಸಹ ಇದೇ ಸಲಹೆಯನ್ನು ಮಾಡಿದೆ.

10.4 ರಾಜ್ಯ ಸರ್ಕಾರವು ಪ್ರತಿಷ್ಠಾಪಿಸಿರುವ ದಿವಂಗತ ದೇವರಾಜ ಅರಸರ ಪ್ರತಿಮೆ, ಶರಣಬಸವೇಶ್ವರ ಪ್ರತಿಮೆ ಅನಾವರಣ ಕಾರ್ಯಕ್ರಮದಲ್ಲಿ ಆಯೋಗವು ಸಕ್ರಿಯ ಪಾತ್ರವನ್ನು ವಹಿಸಿತ್ತು. ಅಲ್ಲದೆ ಸಾಹಿತಿಗಳಾದ ಡಾ:ಕುವೆಂಪು ಮತ್ತು ಶ್ರೀಯುತ ಬಿ.ಎಂ.ಶ್ರೀ ಅವರ ಪ್ರತಿಮೆ ಅನಾವರಣದಲ್ಲಿಯೂ ಸಹ ಆಯೋಗದ ಕೊಡುಗೆ ಅಪಾರ.

10.5 ಬೆಂಗಳೂರು ವೈಶಿಷ್ಟ್ಯ ಮತ್ತು ಅಸ್ತಿತ್ವವನ್ನು ಪ್ರತಿನಿಧಿಸುವ ಪುರಾತನ ಶೈಲಿಯ ಕೆಲವು ಕಟ್ಟಡಗಳನ್ನು ಇತರ ನಿರ್ಮಾಣ ಚಟುವಟಿಕೆಗಳಿಂದಾಗಿ ಕೆಡವಲಾಗಿಲ್ಲ ಅಥವಾ ವಿರೂಪಗೊಂಡಿಲ್ಲವೆಂಬುದನ್ನು ಖಾತ್ರಿಪಡಿಸಿಕೊಳ್ಳಲು ಆಯೋಗವು ಕ್ರಮ ಕೈಗೊಂಡಿದೆ. "ಮಾಣಿಕ್ಯವೇಲು ಮ್ಯಾನ್ಷನ್ ಪ್ರಾಂಗಣದಲ್ಲಿ

ಒಂದು ಬಹುಮಹಡಿ ಕಟ್ಟಡ ನಿರ್ಮಾಣ ಪ್ರಸ್ತಾವವನ್ನು ಆಯೋಗವು ಪರಿಶೀಲಿಸಿತು ಮತ್ತು ಈ ಪ್ರಮುಖ ಭವನ ಮತ್ತು ಅರ ಉದ್ಯಾನ ಪರಿಸರವನ್ನು ಮಾರ್ಪಡಿಸದಂತೆ ನೋಡಿಕೊಳ್ಳಲು ಸರ್ಕಾರಕ್ಕೆ ತೀವ್ರವಾಗಿ ಪ್ರತಿಪಾದಿಸಿದೆ. ಸರ್ಕಾರವು ಆಯೋಗದ ಸಲಹೆಯನ್ನು ಒಪ್ಪಿದೆ ಮತ್ತು ಒಂದು ಸಮಾಜ ಸೇವಾ ಸಂಸ್ಥೆಯು ಕಟ್ಟಡವನ್ನು ಈಗಿರುವಂತೆಯೇ ಮತ್ತು ಯಾವುದೇ ಬದಲಾವಣೆ ಇಲ್ಲದೆ ಉಪಯೋಗಿಸುತ್ತಿದೆ.

10.6 ಅಂತೆಯೇ ಒಂದು ಹೆಗ್ಗುರುತಾಗಿರುವ 'ಕ್ಯಾಷ್ ಫಾರ್ಮಸಿ' ಆವರಣವನ್ನು ಕೆಡವಲು ಮತ್ತು ಅಲ್ಲಿ ಒಂದು ಬಹುಮಹಡಿ ಕಟ್ಟಡ ನಿರ್ಮಾಣ ಮಾಡುವ ಪ್ರಸ್ತಾವವನ್ನು ಆಯೋಗವು ತಿರಸ್ಕರಿಸಿತು ಮತ್ತು ಪ್ರಸ್ತಾವವನ್ನು ಮುಂದುವರಿಸಬಾರದೆಂಬ ಆಯೋಗದ ಅಭಿಪ್ರಾಯವನ್ನು ಸರ್ಕಾರ ಮತ್ತು ನಗರ ನಿಗಮವು ಒಪ್ಪಿತು. ನಗರ ನಿಗಮವು ಯೋಜನೆಗೆ ನೀಡಿದ ಲೈಸೆನ್ಸ್ ಅನ್ನು ಹಿಂತೆಗೆದುಕೊಂಡಿದೆ.

10.7 ಬೆಂಗಳೂರಿನ ಸೌಂದರ್ಯವನ್ನು ಕಾಪಾಡಿಕೊಂಡು ಬರುವ ಸಲುವಾಗಿ ಆಯೋಗವು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಸಂಘಟನೆಯನ್ನು ರಚಿಸಿ ವನಮಹೋತ್ಸವ ಕಾರ್ಯಾಚರಣೆಯನ್ನು ತೊಡಗಿಸಿಕೊಂಡಿದೆ. ಹೆರಿಟೇಜ ಕನ್ಸರ್ವೇಶನ ಮೈಸೂರು ಹಾಗೂ ಬೆಂಗಳೂರಿನಲ್ಲಿ ಆಯೋಗದ ಒಂದು ಕಾರ್ಯಾಲಯ ತೆರೆಯುವುದನ್ನು ಆಯೋಗವು ಪರಿಶೀಲಿಸುತ್ತಿದೆ.

10.8 ಜನಸಂದಣಿ ಇರುವ ಸ್ಥಳಗಳಲ್ಲಿ ಪಾದಚಾರಿಗಳಿಗೆ ಸೌಕರ್ಯ ಕಲ್ಪಿಸಿ ಕೊಡುವ ಹೊಸ ಸಾಧನೆಯನ್ನು ಆಯೋಗ ರಚಿಸಿದೆ. ಇದರಿಂದ ವಾಹನಗಳ ಧೀಡು ಸಡಿಲವಾಗುವಂತೆ ಪ್ರಯಾಣಿಕರಲ್ಲಿ ಸುಭದ್ರತೆ ಕಾಣುವ ಕುರುಹು ಕಂಡು ಬಂದಿದೆ.

10.9 ಬೆಂಗಳೂರು ನಗರದ ಸೌಂದರ್ಯ ಮತ್ತು ಪರಿಸರವನ್ನು ಕಾಪಾಡುವಲ್ಲಿ ನಾಗರೀಕರ ಆಸಕ್ತಿಯನ್ನು ಹೆಚ್ಚಿಸುವ ಒಂದು ಸಾಧನವಾಗಿ ಆಯೋಗವು ಕಿರು ಹೊತ್ತಿಗೆಗಳ ಪ್ರಕಟಣೆಯನ್ನು ಕೈಗೆತ್ತಿಕೊಂಡಿದೆ. ''ನಿಮ್ಮ ಬೆಂಗಳೂರು ಅದರ ಕೆರೆಗಳು'' ''ನಿಮ್ಮ ಬೆಂಗಳೂರು ಅದರ ಮರಗಳು'' ''ನಿಮ್ಮ ಬೆಂಗಳೂರು ಅದರ ಪೂಜಾ ಸ್ಥಳಗಳು'' ಇತ್ಯಾದಿ ಶೀರ್ಷಿಕೆಯಿರುವ ಐದು ಪ್ರಕಟಣೆಗಳನ್ನು ಹೊರತರಲಾಗುವುದು. ಇವುಗಳಲ್ಲಿ ಎರಡು ಅತಿ ಶೀಘ್ರದಲ್ಲಿಯೇ ಸಿದ್ಧವಾಗುವ ನಿರೀಕ್ಷೆ ಇದೆ.

10.10 ಆಯೋಗವು ಯೋಜನಾ ಕಾರ್ಯಯೋಜನೆಯ ಅಡಿಯಲ್ಲಿ 6 ಲಕ್ಷ ರೂಪಾಯಿಗಳ ವಾರ್ಷಿಕ ಸಹಾಯಾನುದಾನ ಬಜೆಟಿನಿಂದ ಕಾರ್ಯನಿರ್ವಹಿಸುತ್ತಿದೆ.

## 11 ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ

11.1 ಕರ್ನಾಟಕ ಸರ್ಕಾರವು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರವನ್ನು ಅಧಿನಿಯಮ 1985ರ ಮೇರೆಗೆ ರಚಿಸಿರುತ್ತಾರೆ. ಈ ಅಧಿನಿಯಮವು ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಒಳಗೊಂಡಿರುವ ಕ್ಷೇತ್ರಗಳ ಪರಿಮಿತವಾದ ಮತ್ತು ಸುವ್ಯವಸ್ಥಿತ ಬೆಳವಣಿಗೆಯ ಬಗ್ಗೆ ಯೋಜನೆಗಳನ್ನು ತಯಾರಿಸುವುದು, ಅವುಗಳ ಸಮನ್ವಯ ಮತ್ತು ಮೇಲ್ವಿಚಾರಣೆಯ ಉದ್ದೇಶಕ್ಕಾಗಿ ಮತ್ತು ಇವುಗಳಿಗೆ ಸಂಬಂಧಪಟ್ಟಂತೆ ಇತರ ವಿಷಯಗಳನ್ನು ನೋಡಿಕೊಳ್ಳುವುದಕ್ಕಾಗಿ ಒಂದು ಪ್ರಾಧಿಕಾರವನ್ನು ಸ್ಥಾಪಿಸುವ ಅನುವು ಮಾಡಿಕೊಡುತ್ತದೆ.

11.2 ಈ ಪ್ರಾಧಿಕಾರದ ಕಾರ್ಯಕ್ಷೇತ್ರ ವ್ಯಾಪ್ತಿಯು ಬೆಂಗಳೂರು ಮಹಾನಗರ ಪ್ರದೇಶವಾಗಿದ್ದು ಇದರಲ್ಲಿ:

1) ಬೆಂಗಳೂರು ಜಿಲ್ಲೆ (ನಗರ)
2) ಬೆಂಗಳೂರು ಗ್ರಾಮಾಂತರ ಜಿಲ್ಲೆ
3) ಕೋಲಾರ ಜಿಲ್ಲೆಯ ಮಾಲೂರು ತಾಲ್ಲೂಕು ಸೇರಿದಂತೆ

ಪ್ರಾಧಿಕಾರದ ಕ್ಷೇತ್ರವು ವಿಸ್ತೀರ್ಣ 8721 ಚದರ ಕಿಲೋ ಮೀಟರ್ ಆಗಿರುತ್ತದೆ. ಇದರಲ್ಲಿ ಬೆಂಗಳೂರು ನಗರ ಸಮೂಹ (ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಇರುವ 1279 ಚದರ ಕಿಲೋ ಮೀಟರ್) ಆನೇಕಲ್, ಚನ್ನಪಟ್ಟಣ, ರಾಮನಗರ, ದೇವನಹಳ್ಳಿ, ಹೊಸಕೋಟೆ, ದೊಡ್ಡಬಳ್ಳಾಪುರ, ಕನಕಪುರ, ಮಾಗಡಿ, ಮಾಲೂರು, ನೆಲಮಂಗಲ ಮತ್ತು ವಿಜಯಪುರ ಪಟ್ಟಣಗಳು ಸೇರಿವೆ.

11.3 ಈ ಪ್ರಾಧಿಕಾರಕ್ಕೆ ಕರ್ನಾಟಕದ ಮಾನ್ಯ ಮುಖ್ಯ ಮಂತ್ರಿಗಳು ಅಧ್ಯಕ್ಷರಾಗಿಯೂ ಮತ್ತು ಮಾನ್ಯ ಬೆಂಗಳೂರು ನಗರಾಭಿವೃದ್ಧಿಯ ರಾಜ್ಯ ಸಚಿವರು ಉಪಾಧ್ಯಕ್ಷರಾಗಿರುತ್ತಾರೆ. ಮತ್ತು ವಿಧೇಯಕದ ಸೆಕ್ಷನ್ 3(1)ರ ನ್ವಯ ಅಧಿಕಾರಿಗಳು ಹಾಗೂ ಅಧಿಕಾರೇತರ ಸದಸ್ಯರುಗಳು ಇರುತ್ತಾರೆ.

11.4 ಪ್ರಾಧಿಕಾರದ ಮುಖ್ಯ ಸಂಸ್ಥೆಯಲ್ಲದೆ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಕಾನೂನು 1985ರ ಸೆಕ್ಷನ್ 8ರಡಿಯಲ್ಲಿ ಕಾರ್ಯಪಾಲ ಸಮಿತಿಯೊಂದನ್ನು ರಚಿಸಲಾಗಿದೆ. ಇದಕ್ಕೆ ಮಾನ್ಯ ಬೆಂಗಳೂರು ನಗರಾಭಿವೃದ್ಧಿ ರಾಜ್ಯ ಸಚಿವರು ಅಧ್ಯಕ್ಷರಾಗಿರುತ್ತಾರೆ. ಸೂಪರ್ ಟೈಂ ಸ್ಕೇಲಿನ ದರ್ಜೆಯ ಐ.ಎ.ಎಸ್. ಅಧಿಕಾರಿಯವರು ಪ್ರಾಧಿಕಾರದ ಮಹಾನಗರ ಆಯುಕ್ತರಾಗಿದ್ದು ಅವರಿಗೆ ಸಹಾಯಕರಾಗಿ ನಗರ ಯೋಜನಾ ಇಲಾಖೆಯ ಇಬ್ಬರು ಅಧಿಕಾರಿಗಳು, ಅಂದರೆ ನಗರ ಯೋಜನಾ ಜಂಟಿ ನಿರ್ದೇಶಕರು ಮತ್ತು ನಗರ ಉಪ ನಿರ್ದೇಶಕರು ಹಾಗೂ ಕೆ.ಎ.ಎಸ್.ದರ್ಜೆಯ ಸಹಾಯಕ ಕಮೀಷನರವರು ಪ್ರಾಧಿಕಾರದ ಸಹಾಯಕ ಮಹಾ ನಗರ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಾರೆ.

11.5 <u>ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧಿಕಾರ ಮತ್ತು ಕಾರ್ಯಗಳು</u>:-

ಬೆಂಗಳೂರು ಮಹಾನಗರ ಪ್ರದೇಶದ ವ್ಯವಸ್ಥಿತ ಬೆಳವಣಿಗೆಗಾಗಿ ಒಂದು ರಚನಾ ಯೋಜನೆಯನ್ನು ತಯಾರಿಸುವುದು ಪ್ರಾಧಿಕಾರದ ಮುಖ್ಯ ಕೆಲಸಗಳಲ್ಲಿ ಒಂದಾಗಿದೆ. ಬೆಂಗಳೂರು ಮಹಾನಗರದ ಅಭಿವೃದ್ಧಿಗಾಗಿ ಕಾರ್ಯನಿರ್ವಹಿಸುತ್ತಿರುವ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಕರ್ನಾಟಕ ಗೃಹ ನಿರ್ಮಾಣ ಮಂಡಳಿ, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ದೂರವಾಣಿ ಮತ್ತು ಇತರೆ ನಿಗಮಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು ಪ್ರಾಧಿಕಾರದ ಮುಖ್ಯ ಪ್ರಕಾರ್ಯಗಳಲ್ಲಿ ಒಂದು. ಸರ್ಕಾರವು ಈ ಬಗ್ಗೆ ಸಮನ್ವಯ ಸಮಿತಿಯೊಂದನ್ನು ರಚಿಸಿದ್ದು ಇದಕ್ಕೆ ಮಹಾನಗರ ಆಯುಕ್ತರವರು ಅಧ್ಯಕ್ಷರಾಗಿರುತ್ತಾರೆ.

11.6 <u>ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಕೈಗೊಂಡಿರುವ ಕೆಲಸಗಳ ವಿವರಗಳು</u>:-

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಈ ಕೆಳಕಂಡ ಯೋಜನೆಗಳನ್ನು ಕೈಗೊಂಡಿದೆ.

ಅ) <u>ಬೆಂಗಳೂರು ಮಹಾನಗರ ಪ್ರದೇಶಕ್ಕೆ ರಚನಾ ಯೋಜನೆ ತಯಾರಿಕೆ</u>:-

ರಚನಾ ಯೋಜನೆಯು ಬೆಂಗಳೂರು ಮಹಾನಗರ ಪ್ರದೇಶದ ವ್ಯವಸ್ಥಿತ ಅಭಿವೃದ್ಧಿಗಾಗಿ ನೀತಿ ನಿರೂಪಣೆ, ವಿಧಿ ವಿಧಾನಗಳು ಹಾಗೂ ಕಾರ್ಯಕ್ರಮಗಳನ್ನು ನಿರೂಪಿಸುವ ನಕ್ಷೆಗಳು ಹಾಗೂ ವರದಿಗಳನ್ನು ಒಳಗೊಂಡಿರುತ್ತದೆ. ರಚನಾ ಯೋಜನೆಯನ್ನು ತಯಾರಿಸುವ ಕಾರ್ಯವಿಧಾನವನ್ನು ರಚಿಸಿ ಅಂತಿಮ ಸ್ವರೂಪವನ್ನು ಕೊಡಲಾಗುತ್ತಿದೆ. ಈ ರಚನಾ ಯೋಜನೆಯ ವಿವರಗಳನ್ನು ಸೇರಿಸಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ಅಧಿನಿಯಮವನ್ನು ತಿದ್ದುಪಡಿ ಮಾಡಲು ಸರ್ಕಾರಕ್ಕೆ ಪತ್ರ ಬರೆಯಲಾಗಿದೆ.

ಆ) <u>ಬೆಂಗಳೂರು ಮಹಾನಗರ ಪ್ರದೇಶದ ನಿರ್ವಹಣೆಯ ಬಗ್ಗೆ ಅಧ್ಯಯನ</u>:-

ಕಲ್ಕತ್ತದಲ್ಲಿರುವ ಪ್ರೈಮ್ಸ್ ರಿಸರ್ಚ್ ಫೌಂಡೇಶನ್(ಪಿ.ಆರ್.ಎಫ್) ಸಂಸ್ಥೆಗೆ ಈ ಅಧ್ಯಯನವನ್ನು 2.25 ಲಕ್ಷ ರೂ.ಗಳ ವೆಚ್ಚದಲ್ಲಿ ಮಾಡಿ ಮುಗಿಸಲು ವಹಿಸಲಾಗಿತ್ತು. ಈ ಅಧ್ಯಯನವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಜಿಲ್ಲೆಯ ಆಡಳಿತ ಮುಂತಾದವುಗಳ ಕೆಲವು ಕಾರ್ಯಗಳಿಗೆ ಸಂಬಂಧಿಸಿದಂತೆ ಜಾರಿಯಲ್ಲಿರುವ ಶಾಸನಗಳು ಸಂಘ ಸಂಸ್ಥೆಗಳು ಹಾಗೂ ಅವುಗಳ ರಚನೆಗಳು ಮುಂತಾದವುಗಳನ್ನೊಳಗೊಂಡಿದ್ದು, ಬೆಂಗಳೂರು ಮಹಾನಗರ ಪ್ರದೇಶದ ಉತ್ತಮ ನಿರ್ವಹಣೆಗಾಗಿ, ಯೋಜನೆ ಅಭಿವೃದ್ಧಿ ಕಾರ್ಯಗಳಲ್ಲಿ ಕೆಲವು ಕಾರ್ಯಗಳನ್ನು ಹೊಣೆಯಲ್ಲಿಟ್ಟುಕೊಳ್ಳುವ ಅಧಿಕಾರಿಗಳು, ಮುಂತಾದವುಗಳಿಗೆ ಸಂಬಂಧಿಸಿದ ಶಾಸನಗಳಲ್ಲಿರುವ ನ್ಯೂನತೆಗಳನ್ನು ಗುರುತಿಸಿ ಮುಂದಿನ ಕ್ರಮಗಳನ್ನು ಸೂಚಿಸುವುದು ಈ ಅಧ್ಯಯನದಲ್ಲಿ ಸೇರಿದೆ.

ಅಂತಿಮ ವರದಿಯನ್ನು ಶಿಫಾರಸ್ಸುಗಳೊಂದಿಗೆ ಸ್ವೀಕರಿಸಲಾಗಿದೆ.

ಇ) <u>ಬೃಹತ್ ನಗರ ಯೋಜನೆ:</u>

1) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ಬೆಂಗಳೂರು ಬೃಹತ್ ನಗರ ಯೋಜನೆಯನ್ನು ರೂಪಿಸಿ ಭಾರತ ಸರ್ಕಾರಕ್ಕೆ ಮತ್ತು ಪ್ಲಾನಿಂಗ್ ಕಮೀಷನ್‌ಗೆ ಸಲ್ಲಿಸಲಾಗಿದೆ. ಇದಕ್ಕೆ ಕೇಂದ್ರದ ಅವಶ್ಯ ಮಂಜೂರಾತಿಗಾಗಿ ಕಾಯಲಾಗಿದೆ. ಈ ಯೋಜನೆಯು 805 ಕೋಟಿ ರೂ.ಗಳ ವೆಚ್ಚದ್ದಾಗಿದೆ. ಈ ಯೋಜನೆಯನ್ನು 1994-95ರಿಂದ ಶುರು ಮಾಡಬೇಕಾಗಿದೆ. ಸದರಿ ಯೋಜನೆಯು ವೆಚ್ಚದ ಶೇಕಡ 25 ಭಾಗ ರಾಜ್ಯ ಸರ್ಕಾರದಿಂದ ಶೇಕಡ 25 ಭಾಗ ಕೇಂದ್ರ ಸರ್ಕಾರದಿಂದ ಮತ್ತು ಉಳಿದ ಶೇಕಡ 50 ಭಾಗ ಆರ್ಥಿಕ ಸಂಸ್ಥೆಗಳಿಂದ ಎಂಬುದಾಗಿ ಆರ್ಥಿಕ ಮಾದರಿಯಾಗಿದೆ.

2) ಸಾರಿಗೆ ಕ್ಷೇತ್ರದಲ್ಲಿ ರಸ್ತೆ,ಸಂಚಾರ, ಪರಿಸರ, ಅಭಿವೃದ್ಧಿ , ಕೊಳಚೆ ಅಭಿವೃದ್ಧಿ ಸಂಚಾರವನ್ನು ಸುಗಮಗೊಳಿಸಲು ವರ್ತುಲ ರಸ್ತೆ ನಿರ್ಮಾಣ ಮತ್ತು ವಾಹನ ನಿಲ್ದಾಣ ಸ್ಥಳ ಇತ್ಯಾದಿಗಳಂತಹ ಸೌಲಭ್ಯಗಳನ್ನು ಅಭಿವೃದ್ಧಿಗೊಳಿಸಿ ಬೆಂಗಳೂರಿನ ಜೀವನದ ಗುಣಮಟ್ಟವನ್ನು ಹೆಚ್ಚಿಸುವುದೇ ಈ ಯೋಜನೆಯ ಗುರಿಯಾಗಿದೆ.

3) ಭಾರತ ಸರ್ಕಾರವು ಈ ಯೋಜನೆಯನ್ನು ಎಂಟನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಕಾರ್ಯಗತಗೊಳಿಸಿ ಯೋಜನೆಯನ್ನು ರೂ :250 ಕೋಟಿಗೆ ಸೀಮಿತಗೊಳಿಸಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದೆ. ಅಂತೆಯೇ ಭಾರತ ಸರ್ಕಾರದ ಅಭಿಪ್ರಾಯವನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತಾವನೆಗಳನ್ನು ಪರಿಷ್ಕರಿಸಿ, ಕೇಂದ್ರ ಸರ್ಕಾರಕ್ಕೆ ಕಳುಹಿಸಿಕೊಟ್ಟಿದೆ. ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ರೂ:20 ಕೋಟಿ ಅಳವಡಿಸಿದ್ದು ಕೇಂದ್ರ ಪಾಲಿನ ರೂ 20.00 ಕೋಟಿ ಭಾರತ ಸರ್ಕಾರದ ಆಯವ್ಯಯದಲ್ಲಿ ಸೇರಿರುತ್ತದೆ.

11.7 <u>ಏಷ್ಯನ್ ಡೆವಲಪ್‌ಮೆಂಟ್ ಬ್ಯಾಂಕ್ (ಎಡಿಬಿ) ನಿಧಿಯಿಂದ ಕರ್ನಾಟಕ ನಗರ ಮೂಲ ಸೌಕರ್ಯಗಳ ಯೋಜನೆ</u>

ನಗರ ಮೂಲ ಸೌಕರ್ಯಗಳ ಯೋಜನೆಯನ್ನು ಪ್ರಾಧಿಕಾರದಿಂದ ತಯಾರಿಸಿ ಏಷ್ಯನ್ ಡೆವಲಪ್‌ಮೆಂಟ್ ಬ್ಯಾಂಕಿನಿಂದ ಅವಶ್ಯ ಒಪ್ಪಿಗೆ ಮತ್ತು ಮಂಜೂರಾತಿಗಾಗಿ ಭಾರತ ಸರ್ಕಾರಕ್ಕೆ ಸಲ್ಲಿಸಲಾಗಿದೆ. ರೂ.1500 ಕೋಟಿಗಳ ಅಂದಾಜು ವೆಚ್ಚದಲ್ಲಿ ಬೆಂಗಳೂರು-ಮೈಸೂರು ನಡುವಿನ ಹೊಸ ಶೀಘ್ರ ರಸ್ತೆ ರಹದಾರಿಯನ್ನು ಒದಗಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

11.8 ಏಷಿಯನ್ ಡೆವಲಪ್‌ಮೆಂಟ್ ಬ್ಯಾಂಕಿನ ಸಹಾಯ ತಂಡ ಹಿರಿಯ ವರ್ಗದವರು 1993ನೇ ಸೆಪ್ಟೆಂಬರ್‌ನಲ್ಲಿ ಬೆಂಗಳೂರಿಗೆ ಭೇಟಿ ನೀಡಿ ಪ್ರಸ್ತಾವನೆಯನ್ನು ಪರಿಶೀಲಿಸಿದರು ಮತ್ತು ತುಮಕೂರು, ರಾಮನಗರ, ಮಳವಳ್ಳಿ ಹಾಗೂ ಮೈಸೂರಿಗೆ ಭೇಟಿ ನೀಡಿದರು. ಸದರಿ ಯೋಜನೆಗೆ ಸುಮಾರು 200 ಮಿಲಿಯನ್ ಡಾಲರುಗಳನ್ನು ಏಷ್ಯನ್ ಡೆವಲಪ್‌ಮೆಂಟ್ ಬ್ಯಾಂಕಿನಿಂದ ಸಹಾಯವಾಗಿ ನಿರೀಕ್ಷಿಸುತ್ತಿದ್ದು ಸಹಾಯ ಅನುಸಂಧಾನ ದಾಖಲೆಯನ್ನು ತಯಾರಿಸುತ್ತಾರೆ. ಒಪ್ಪಿರುವ ಭಾಗಗಳೆಂದರೆ ಬೆಂಗಳೂರು-ಮೈಸೂರು ಶೀಘ್ರ ರಸ್ತೆ,

ತುಮಕೂರು, ರಾಮನಗರ, ಚನ್ನಪಟ್ಟಣಗಳಲ್ಲಿ ಪ್ರತ್ಯಾಕರ್ಷಕ ನಗರಗಳು ಮತ್ತು ಮೈಸೂರು ನಗರದಲ್ಲಿನ ಮೂಲ ಸೌಲಭ್ಯಗಳ ಅಭಿವೃದ್ಧಿ, ಫೆಬ್ರವರಿ 1995ರಲ್ಲಿ ತಾಂತ್ರಿಕ ವರ್ಗದವರು ರಾಜ್ಯಕ್ಕೆ ಭೇಟಿ ನೀಡುವ ನಿರೀಕ್ಷೆ ಇದೆ. ಈ ಯೋಜನೆಯ ವಿವರಗಳು ಸಿದ್ಧವಾಗಿದೆ. ರೂ:200 ಮಿಲಿಯನ್ ಡಾಲರ್‌ನ ಪ್ರಾಜೆಕ್ಟ್‌ಗೆ ಏಡ್-ಮೆಮೋಯರ್ ಒಪ್ಪಂದಕ್ಕೆ ಸಹಿ ಹಾಕಿದ್ದು, ಮೆಸರ್ಸ್ ಹೆಚ್‌ಕೆ:ಎಂಡಿಯಂ ಕನ್ಸಲ್ಟೆಂಟ್‌ಗೆ ತಾಂತ್ರಿಕ ಸಲಹೆಯ ಕಾರ್ಯವನ್ನು ವಹಿಸಿದೆ. ಅನೇಕ ಬಾರಿ ಚರ್ಚೆಯಾದ ನಂತರ ಅಂತಿಮ ನಿರ್ಣಯದ ಪ್ರಕಾರ ತಾಂತ್ರಿಕ ಸಲಹೆಗಾರರು ವರದಿಯನ್ನು ಒಪ್ಪಿಸಿರುತ್ತಾರೆ. ಅದರಂತೆ ಮೈಸೂರು ನಗರವನ್ನು ಕೌಂಟರ್ ಮ್ಯಾಗ್ನೆಟ್ ಆಗಿ ಪರಿವರ್ತಿಸಿ, ತುಮಕೂರು, ರಾಮನಗರ ಮತ್ತು ಚನ್ನಪಟ್ಟಣ ಇವುಗಳನ್ನು ಬೆಳವಣಿಗೆಯ ಕೇಂದ್ರಗಳೆಂದು ಪರಿಗಣಿಸಬಹುದಾಗಿದೆ. ಈ ಯೋಜನೆಯ ಅಂದಾಜು ವೆಚ್ಚದ 107 ಅಮೇರಿಕನ್ ಡಾಲರ್. ಆಯೋಗದ ತಂಡವು ಇದೇ ವರ್ಷದ 28-2-95 ರಂದು ಭೇಟಿ ನೀಡಿದೆ.

## 12. ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ

12.1 ಕರ್ನಾಟಕ ಸರ್ಕಾರದ ಆಜ್ಞೆ ಕ್ರಮಾಂಕ ಹೆಚ್‌ಯುಡಿ 223 ಎಂಎನ್‌ಎಕ್ಸ್ 93, ದಿನಾಂಕ 16-8-93ರಲ್ಲಿನ ಆದೇಶದ ಪ್ರಕಾರ ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯನ್ನು ಭಾರತೀಯ ಕಂಪನಿ ಕಾಯ್ದೆ 1956ರ ಅಡಿಯಲ್ಲಿ ಸ್ಥಾಪಿಸಿದೆ. ಅಂತೆಯೇ 2.11.1993 ರಂದು ಈ ಸಂಸ್ಥೆಯು ರಿಜಿಸ್ಟ್ರೇಷನ್ ಸಂಖ್ಯೆ.08:14869 ಅನ್ವಯ ನೋಂದಣಿಯಾಗಿದೆ. ಇದರ ಮುಖ್ಯ ಧ್ಯೇಯವೆಂದರೆ ಸ್ಥಳೀಯ ಸಂಸ್ಥೆಗಳಿಗೆ ಮೂಲ ಸೌಕರ್ಯಗಳ ಅಭಿವೃದ್ಧಿಗಾಗಿ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಧನ ಸಹಾಯ ನೀಡುವುದು.

12.2 ಈ ಕಂಪನಿಯು ರೂ.10.00 ಕೋಟಿಗಳ ಪ್ರಾರಂಭಿಕ ಬಂಡವಾಳದಿಂದ ನೋಂದಾಯಿಸಲ್ಪಟ್ಟಿದ್ದು 1994-95ರ ಸಾಲಿನ ಆಯ ವ್ಯಯದಲ್ಲಿ ಸರ್ಕಾರದ ವತಿಯಿಂದ ರೂ.510.00 ಲಕ್ಷವನ್ನು ನಿಗದಿಪಡಿಸಿದೆ. ರಾಜ್ಯ ನಗರ ಯೋಜನಾ ಮಂಡಳಿಯಿಂದ ರೂ.2.00 ಕೋಟಿಯನ್ನು ಕಂಪನಿಗೆ ವರ್ಗಾಯಿಸಿದೆ. ವಿಸರ್ಜಿತ ಕಂಪನಿಯಾದ ನಗರ ಅಭಿವೃದ್ಧಿ ಸಂಸ್ಥೆಯಿಂದ ರೂ.5.00 ಲಕ್ಷಗಳ ಪ್ರಾರಂಭಿಕ ನೋಂದಾವಣೆ ಪೂರ್ವ ಕೆಲಸಗಳ ನಿರ್ವಹಣೆ ಹಾಗೂ ವೆಚ್ಚವನ್ನು ಪರಿಶೀಲಿಸಲು ವರ್ಗಾಯಿಸಿದೆ.

12.3 ಈ ಕಂಪನಿಯ ಮುಖ್ಯ ಧ್ಯೇಯಗಳು ಈ ರೀತಿ ಇವೆ:

ಅ) ರಾಜ್ಯದಲ್ಲಿನ ನಗರ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುವ ಕಾರ್ಯಕ್ರಮದ ಯೋಜನೆಯನ್ನು ರೂಪಿಸುವುದು. ಬೆಂಗಳೂರು ಬೃಹತ್ ನಗರ ಯೋಜನೆ ಹಾಗೂ ಎ.ಡಿ.ಬಿ. ನೆರವಿನ ಕರ್ನಾಟಕ ನಗರ ಮೂಲಭೂತ ಸೌಕರ್ಯ ಯೋಜನೆಗಳನ್ನು ಕಾರ್ಯಗತಗೊಳಿಸುವುದು.

ಬ) ಭಾರತ ಸರ್ಕಾರ, ಕರ್ನಾಟಕ ರಾಜ್ಯ ಸರ್ಕಾರ ಹಾಗೂ ಹಣಕಾಸು ಸಂಸ್ಥೆಗಳಿಂದ ಹಣವನ್ನು ಕ್ರೋಡೀಕರಿಸಿ ಅನುಮೋದಿತ ಯೋಜನೆಗಳಿಗೆ ಸ್ಥಳೀಯ ನಗರ ಸಂಸ್ಥೆಗಳಿಗೆ ಧನ ಸಹಾಯ ಮಾಡುವುದು.

ಇ) ಯೋಜನೆಗಳ ಸಂಯೋಜನಾ ಕಾರ್ಯಕ್ರಮ ಮತ್ತು ನಿಯಂತ್ರಣಗಳೊಂದಿಗೆ ಕಾರ್ಯಗತಗೊಳಿಸುವಿಕೆ ಹಾಗೂ ಸಾಲ ಮರುಪಾವತಿ.

12.4 ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯ ರಚನೆ ಈ ಕೆಳಕಂಡಂತಿದೆ:

1) ಅಧ್ಯಕ್ಷರು : ಸನ್ಮಾನ್ಯ ಮುಖ್ಯ ಮಂತ್ರಿ

2) ಉಪಾಧ್ಯಕ್ಷರು : ಮಾನ್ಯ ಬೆಂಗಳೂರು ನಗರಾಭಿವೃದ್ಧಿ ರಾಜ್ಯ ಸಚಿವರು.

3) ವ್ಯವಸ್ಥಾಪಕ ನಿರ್ದೇಶಕರು : ಸೂಪರ್ ಟೈಂ ಶ್ರೇಣಿಯ ಐ.ಎ.ಎಸ್. ಅಧಿಕಾರಿಗಳು.

<u>ಇತರ ಸದಸ್ಯರುಗಳು</u>

4) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಪ್ರಧಾನ ಕಾರ್ಯದರ್ಶಿಗಳು, ಹಣಕಾಸು ಇಲಾಖೆ.

5) ಪ್ರಧಾನ ಕಾರ್ಯದರ್ಶಿ, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ.

6) ಮಹಾನಗರ ಆಯುಕ್ತರು, ಬಿ.ಎಂ.ಆರ್.ಡಿ.ಎ.

ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ ತನ್ನ ಕಾರ್ಯ ಚಟುವಟಿಕೆಯನ್ನು ತ್ವರಿತಗತಿಯಲ್ಲಿ ಹೆಚ್ಚಿಸುವ ಪ್ರಯಾಸದಲ್ಲಿ ಪ್ರಥಮ ಹೆಜ್ಜೆಯನ್ನಿಟ್ಟಿದೆ.

## 13. ನಗರ ಯೋಜನಾ ಇಲಾಖೆ

13.1 ನಗರ ಮತ್ತು ಗ್ರಾಮಗಳನ್ನು ವ್ಯವಸ್ಥಿತ ಅಭಿವೃದ್ಧಿಗೆ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ನಗರ ಮತ್ತು ಗ್ರಾಮಗಳ ಯೋಜಿತ ಬೆಳವಣಿಗೆಗೆ ತಾಂತ್ರಿಕ ಸಹಾಯ ನೀಡುವುದೇ ನಗರ ಯೋಜನಾ ಇಲಾಖೆಯ ಪ್ರಮುಖ ಜವಾಬ್ದಾರಿಯಾಗಿದೆ.

ನಗರ ಯೋಜನಾ ಇಲಾಖೆ ಪ್ರಮುಖವಾಗಿ ನಗರ, ಪಟ್ಟಣ ಮತ್ತು ಗ್ರಾಮಗಳ ಸುವ್ಯವಸ್ಥಿತ ಬೆಳವಣಿಗೆಗಾಗಿ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸುವ ಗುರಿಯನ್ನು ಹೊಂದಿರುತ್ತದೆ.

### 13.2 ನಗರ ಯೋಜನಾ ಇಲಾಖೆಯ ಮುಖ್ಯ ಕಾರ್ಯ ಚಟುವಟಿಕೆಗಳು:

1. ನಗರ, ಪಟ್ಟಣ ಮತ್ತು ಮುಖ್ಯ ಗ್ರಾಮಗಳಿಗೆ ಭೌತಿಕ ಮೋಜಣಿ ಹಾಗೂ ಆರ್ಥಿಕ ಸಾಮಾಜಿಕ ಸಮೀಕ್ಷೆ ನಡೆಸಿ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸುವುದು.

2. ಸಣ್ಣ ಮತ್ತು ಮಧ್ಯಮ ಪಟ್ಟಣಗಳಿಗೆ ಸಮಗ್ರ ಅಭಿವೃದ್ಧಿ ಯೋಜನೆಯ ವರದಿಗಳನ್ನು ತಯಾರಿಸುವುದು.

3. ಕೊಳಚೆ ಪ್ರದೇಶದ ಸುಧಾರಣಾ ಯೋಜನೆಗಳು ಮತ್ತು ನಗರ ವಿಸ್ತರಣಾ ಯೋಜನೆಗಳನ್ನು ಸಿದ್ಧಪಡಿಸುವುದು.

4. ರಾಜ್ಯ ನಗರ ಯೋಜನಾ ಮಂಡಳಿ ಮತ್ತು ನಗರ ಅಭಿವೃದ್ಧಿ ಪ್ರಾಧಿಕಾರಗಳು, ನಗರ ಯೋಜನಾ ಪ್ರಾಧಿಕಾರಗಳು, ಕರ್ನಾಟಕ ನಗರ ಮತ್ತು ಗ್ರಾಮಾಂತರ ಕಾಯಿದೆ ಅನ್ವಯ ಯೋಜನೆಗಳನ್ನು ಸಿದ್ಧಪಡಿಸಲು ಹಾಗೂ ಯೋಜನೆಗಳ ಅನುಷ್ಠಾನ ಕಾರ್ಯಗಳನ್ನು ನಿರ್ವಹಿಸುವಲ್ಲಿ ನೆರವು ನೀಡುವುದು.

5. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಕರ್ನಾಟಕ ಗೃಹ ಮಂಡಳಿ ಹಾಗೂ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವೇ ಮೊದಲಾದ ಅಭಿವೃದ್ಧಿ ಸಂಸ್ಥೆಗಳಿಗೆ ತಾಂತ್ರಿಕ ನೆರವು ನೀಡುವುದು.

6. ಖಾಸಗಿ ವ್ಯಕ್ತಿಗಳ, ಸಂಸ್ಥೆಗಳ, ಸರ್ಕಾರಿ ಮತ್ತು ಅರೆ ಸರ್ಕಾರಿ ಸಂಸ್ಥೆಗಳ ವಿನ್ಯಾಸಗಳನ್ನು ಅಂಗೀಕರಿಸುವುದು.

7. ವ್ಯವಸಾಯ ಭೂಮಿಗಳನ್ನು ವ್ಯವಸಾಯೇತರ ಉದ್ದೇಶಗಳಿಗೆ ಪರಿವರ್ತಿಸುವಲ್ಲಿ ಹಾಗೂ ಗ್ರಾಮ ಮತ್ತು ನಗರ ವಸತಿ ಪ್ರದೇಶಗಳ ಯೋಜನೆ ಹಾಗೂ ಅಭಿವೃದ್ಧಿ ಸಂಬಂಧಿಸಿದ ವಿಷಯಗಳಲ್ಲಿ ತಾಂತ್ರಿಕ ಅಭಿಪ್ರಾಯವನ್ನು ನೀಡುವುದು.

8. ಚಿತ್ರ ಮಂದಿರಗಳ ನಿರ್ಮಾಣಕ್ಕೆ ಸಂಬಂಧಪಟ್ಟಂತೆ ತಾಂತ್ರಿಕ ವರದಿಗಳನ್ನು ಜಿಲ್ಲಾ ದಂಡಾಧಿಕಾರಿಗಳಿಗೆ ಒದಗಿಸುವುದು.

9. ನಗರ ಯೋಜನಾ ಇಲಾಖೆಯ ನಿರ್ದೇಶಕರು — ರಾಜ್ಯ ಯೋಜನಾ ಮಂಡಳಿಯ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ.

18.3 <u>ಇಲಾಖೆಯ ರಚನೆ</u>: ನಗರ ಯೋಜನಾ ಇಲಾಖೆಯ ಕೇಂದ್ರ ಕಛೇರಿ, ಬೆಂಗಳೂರಿನಲ್ಲಿದ್ದು ಧಾರವಾಡದಲ್ಲಿ ಜಂಟಿ ನಿರ್ದೇಶಕರು, ನಗರ ಯೋಜನಾ ಇಲಾಖೆಯ ಕಛೇರಿ ಇರುತ್ತದೆ.

ಪ್ರಸ್ತುತ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ, ನಗರ ಯೋಜನಾ ಸಹಾಯಕ ನಿರ್ದೇಶಕರ ಕಛೇರಿಗಳಿವೆ. ಇದರ ಜೊತೆಗೆ ಯೋಜನಾ ಘಟಕಗಳು, ಹುಬ್ಬಳ್ಳಿ, ಕೆ.ಜಿ.ಎಫ್, ಗದಗ-ಬೆಟಗೇರಿ, ಬಾಗಲಕೋಟೆ, ದಾವಣಗೆರೆ, ಉಡುಪಿ, ಮಲ್ಪೆ, ದಾಂಡೇಲಿ, ರಾಮನಗರ ನಿಪ್ಪಾಣಿ, ರಾಣೆಬೆನ್ನೂರು, ಗಂಗಾವತಿ, ಯಾದಗಿರಿ ಮತ್ತು [illegible] ಗಳಲ್ಲಿವೆ. ಒಟ್ಟಾರೆ 30 ನಗರ ಯೋಜನಾ ಸಹಾಯಕ ನಿರ್ದೇಶಕರುಗಳ ಕಛೇರಿಗಳಿವೆ.

## 13.4 ಕರ್ನಾಟಕ ನಗರ ಮತ್ತು ಗ್ರಾಮ ಯೋಜನಾ ಅಧಿನಿಯಮ ವಿಸ್ತರಣೆ :-

1. ಕರ್ನಾಟಕ ನಗರ ಮತ್ತು ಗ್ರಾಮ ಯೋಜನಾ ಅಧಿನಿಯಮವನ್ನು ರಾಜ್ಯದ 26 ನಗರ ಪ್ರದೇಶಗಳಿಗೆ ಸ್ಥಳೀಯ ಯೋಜನಾ ಕ್ಷೇತ್ರವನ್ನು ಘೋಷಿಸುವ ಮೂಲಕ ವಿಸ್ತರಿಸಲಾಗಿದೆ.

2. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಲ್ಲದೇ ಸರ್ಕಾರ 20 ನಗರ ಪ್ರದೇಶಗಳಿಗೆ ನಗರಾಭಿವೃದ್ಧಿ ಪ್ರಾಧಿಕಾರಗಳನ್ನು ರಚಿಸಿರುತ್ತದೆ. ವಿವರ ಈ ಕೆಳಕಂಡಂತಿದೆ.

| | |
|---|---|
| 1. ಬಳ್ಳಾರಿ | 11. ಕೋಲಾರ |
| 2. ಬೆಳಗಾಂ | 12. ಕೆ.ಜಿ.ಎಫ್. |
| 3. ಬೀದರ | 13. ಕಾರವಾರ |
| 4. ಬಿಜಾಪೂರ | 14. ಮಂಗಳೂರು |
| 5. ಚಿಕ್ಕಮಗಳೂರು | 15. ಮೈಸೂರು |
| 6. ಚಿತ್ರದುರ್ಗ | 16. ಮಂಡ್ಯ |
| 7. ದಾವಣಗೆರೆ | 17. ಮಡಿಕೇರಿ |
| 8. ಗುಲ್ಬರ್ಗಾ | 18. ರಾಯಚೂರು |
| 9. ಹುಬ್ಬಳ್ಳಿ-ಧಾರವಾಡ | 19. ಶಿವಮೊಗ್ಗ |
| 10. ಹಾಸನ | 20. ತುಮಕೂರು |

ಈ ಪ್ರಾಧಿಕಾರಗಳು ಯೋಜನಾ ಪ್ರಾಧಿಕಾರಗಳು ಸಹ ಆಗಿರುತ್ತವೆ. ಸ್ಥೂಲಾಭಿವೃದ್ಧಿ ಯೋಜನೆ:ವ್ಯಾಪಕಾಭಿವೃದ್ಧಿ ಯೋಜನೆಗಳ ಸಿದ್ಧತೆ, ಸರ್ಕಾರದಿಂದ ತಾತ್ಕಾಲಿಕ ಅಥವಾ ಅಂತಿಮ ಅಂಗೀಕಾರ ಪಡೆಯುವುದು ಹಾಗೂ ಈ ಯೋಜನೆಗಳ ಕಾರ್ಯಾನುಷ್ಠಾನದ ಜವಾಬ್ದಾರಿಯನ್ನು ಈ ಪ್ರಾಧಿಕಾರಗಳು ಹೊಂದಿರುತ್ತವೆ.

3. <u>ಯೋಜನಾ ಪ್ರಾಧಿಕಾರಗಳು</u> :-

ಈ ಕೆಳಕಂಡ ನಗರ ಪ್ರದೇಶಗಳಲ್ಲಿ ಯೋಜನಾ ಪ್ರಾಧಿಕಾರ ಕಾರ್ಯನಿರ್ವಹಣೆ ಮುಂದುವರೆಯುತ್ತಿದೆ.

1. ಬಾಗಲಕೋಟೆ
2. ದಾಂಡೇಲಿ
3. ಗದಗ-ಬೆಟಗೇರಿ
4. ಉಡುಪಿ-ಮಲ್ಪೆ
5. ವಾಡಿ-ಶಹಬಾದ

ಈ ಪ್ರದೇಶಗಳಲ್ಲಿನ ನಗರ ಯೋಜನಾ ಸಹಾಯಕ ನಿರ್ದೇಶಕರುಗಳು ಈ ಯೋಜನಾ ಪ್ರಾಧಿಕಾರಗಳ ಸದಸ್ಯ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

13.5 <u>ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯನ್ನು ಇತರೇ ಪಟ್ಟಣಗಳಿಗೆ ವಿಸ್ತರಿಸುವುದು</u> :-

ಕರ್ನಾಟಕ ರಾಜ್ಯ ನಗರ ಯೋಜನಾ ಮಂಡಳಿಯು 40,000 ಕ್ಕೂ ಹೆಚ್ಚಿನ ಜನಸಂಖ್ಯೆಯಿರುವ 21 ಪಟ್ಟಣಗಳಿಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯಿದೆಯನ್ನು ವಿಸ್ತರಿಸಲು ನೀತಿ ನಿರ್ಣಯ ಕೈಗೊಂಡಿದೆ. ಅದರಂತೆ ಈ ಕೆಳಕಂಡ ಪಟ್ಟಣಗಳಿಗೆ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಲಾಗಿದೆ.

ಗಂಗಾವತಿ, ರಾಣಿಬೆನ್ನೂರು, ರಬಕವಿ-ಬನಹಟ್ಟಿ, ಬಸವಕಲ್ಯಾಣ, ನಿಪ್ಪಾಣಿ ಗೋಕಾಕ, ಶಿರಸಿ, ಚಿಂತಾಮಣಿ, ಚನ್ನಪಟ್ಟಣ, ರಾಮನಗರಂ, ಜಮಖಂಡಿ, ಚಾಮರಾಜನಗರ, ಯಾದಗೀರ, ಹಾವೇರಿ.

13.6 <u>ಐ.ಡಿ.ಎಸ್.ಎಂ.ಟಿ. ಯೋಜನೆಗಳಿಗೆ ಯೋಜನಾ ವರದಿಗಳನ್ನು ತಯಾರಿಸುವುದು</u> :-

ನಗರ ಯೋಜನಾ ಇಲಾಖೆಯು ಸ್ಥಳೀಯ ಸಂಸ್ಥೆ, ಪೌರಾಡಳಿತ ನಿರ್ದೇಶನಾಲಯದ ಸಹಯೋಗದೊಂದಿಗೆ ಐ.ಡಿ.ಎಸ್.ಎಂ.ಟಿ. ಯೋಜನೆಯಲ್ಲಿ ಯೋಜನಾ ವರದಿಗಳನ್ನು ತಯಾರಿಸಬೇಕಾಗಿದೆ. 8ನೇ ಪಂಚ ವಾರ್ಷಿಕ ಯೋಜನೆ ಅವಧಿಯಲ್ಲಿ ಐ.ಡಿ.ಎಸ್.ಎಂ.ಟಿ. ಯೋಜನೆಯಲ್ಲಿ ಸೇರಿಸಲು ರಾಜ್ಯ ಸರ್ಕಾರವು 66 ಪಟ್ಟಣಗಳ ಪಟ್ಟಿ ಮಾಡಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಿದೆ. ಪ್ರಸ್ತುತ ಸಾಲಿನಲ್ಲಿ ಮುಳಬಾಗಿಲು, ಚನ್ನರಾಯಪಟ್ಟಣ ಸೇರಿದಂತೆ ಒಟ್ಟು 31 ಸ್ಥಳಗಳಿಗೆ ಯೋಜನಾ ವರದಿಗಳನ್ನು ತಯಾರಿಸಿದೆ.

13.7 <u>ರೂಪರೇಷೆಗಳು</u> :- 1993-94ನೇ ಸಾಲಿನಲ್ಲಿ ಇಲಾಖೆಯು ಒಟ್ಟು 288 ರೂಪರೇಷೆಗಳನ್ನು ತಯಾರಿಸಿ ಕಾರ್ಯಗತ ಮಾಡುವ ಸಂಬಂಧಪಟ್ಟ ಸಂಸ್ಥೆಗಳಿಗೆ ನೀಡಲಾಗಿ, ಪ್ರಸ್ತುತ ಸಾಲಿನಲ್ಲಿ ಡಿಸೆಂಬರ 1994ರ ಅಂತ್ಯದ ವರೆಗೆ 182 ರೂಪರೇಷೆಗಳನ್ನು ತಯಾರಿಸಿದೆ.

ಯೋಜನಾ ಕಾರ್ಯಗಳಿಗಾಗಿ 1994-95ರ ಸಾಲಿಗೆ ಇಲಾಖೆಯು ತಲಾ ರೂ.36.00 ಲಕ್ಷ ಹಣವನ್ನು ಆಯವ್ಯಯ ದಲ್ಲಿ ಪಡೆದಿದೆ.

13.8 <u>ಅಭಿವೃದ್ಧಿ ಯೋಜನೆಗಳು</u> :-

1 ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ ಅನ್ವಯಿಸದೇ ಇರುವ ಅನೇಕ ಪಟ್ಟಣಗಳಿಗೆ ನಗರ ಯೋಜನಾ ಇಲಾಖೆಯು ಅಭಿವೃದ್ಧಿ ನಕ್ಷೆಗಳನ್ನು ತಯಾರಿಸಿ ಹೀಗೆ ತಯಾರಿಸಿದ ಅಭಿವೃದ್ಧಿ ಯೋಜನೆಗಳಲ್ಲಿ ಕೇವಲ ಭೂ ಉಪಯೋಗಗಳ ಬಗ್ಗೆ ವಿಶ್ಲೇಷಿಸಲಾಗಿತ್ತು. 40 ನಗರ ಪ್ರದೇಶಗಳಿಗೆ ಹಾಗೂ 15 ಅಭಿವೃದ್ಧಿ ಗ್ರಾಮಗಳಿಗೆ ಬೇಸ ಮ್ಯಾಪ ಸೇರಿದಂತೆ ಇಲಾಖೆಯು ವರದಿಯನ್ನು ತಯಾರಿಸುತ್ತಿದೆ.

2. 1994-95ರಲ್ಲಿ ನಗರ ಪ್ರಾಧಿಕಾರಗಳಿಂದ ಬಂದ ಸಿ.ಡಿ.ಪಿ:ಓ.ಡಿ.ಪಿ. ಪರಿಶೀಲನೆ ನಡೆಸಿ, ಸೂಕ್ತ ಮಾರ್ಪಾಡು ಮಾಡುವ ಸಲಹೆಯೊಂದಿಗೆ ಹಿಂದಿರುಗಿಸಲಾಯಿತು. ಅವು ಯಾವುವೆಂದರೆ, ಕೋಲಾರ, ಕೆ.ಜಿ.ಎಫ್. ಚಿಕ್ಕಮಗಳೂರು, ತುಮಕೂರು, ಬೀದರ, ಮಡಿಕೇರಿ, ರಾಯಚೂರು ಮಂಡ್ಯ, ಬೆಳಗಾಂ, ಬಾಗಲಕೋಟೆಗಳ ಪ್ರಾಧಿಕಾರಗಳ ಅಂತಿಮ ಸಿ.ಡಿ.ಪಿ. ಸರ್ಕಾರದ ಮನ್ನಣೆಗಾಗಿ ಕಳುಹಿಸಿಕೊಟ್ಟಿದೆ.

3. ಸರ್ಕಾರಿ ಇಲಾಖೆಗಳಿಗೆ, ಕರ್ನಾಟಕ ಗೃಹನಿರ್ಮಾಣ ಮಂಡಳಿ, ಮತ್ತು ಸ್ಥಳೀಯ ಪ್ರಾಧಿಕಾರಗಳಿಗೆ ಇಲಾಖೆ ತಾಂತ್ರಿಕ ಸಲಹೆಯನ್ನು ಸಹಾಯವನ್ನು ನೀಡುತ್ತಾ ಬಂದಿದೆ.

4. ಈ ಇಲಾಖೆಯ ಮುಖ್ಯ ಕರ್ತವ್ಯ ನಗರ:ಪಟ್ಟಣಗಳ:ಗ್ರಾಮಗಳ ಯೋಜಿತ ಬೆಳವಣಿಗೆಗಾಗಿ ಅಭಿವೃದ್ಧಿ ಯೋಜನೆಗಳನ್ನು ತಯಾರಿಸುವುದು ಹಾಗೂ ನಗರಾಭಿವೃದ್ಧಿ ಕಾರ್ಯಗಳಲ್ಲಿ ತೊಡಗಿರುವ ಸಂಸ್ಥೆಗಳಿಗೆ ತಾಂತ್ರಿಕ ಸಹಾಯ:ಸಲಹೆ ನೀಡುವುದು ಆಗಿರುತ್ತದೆ. 1993-94ರ ಸಾಲಿಗೆ 416 ಪ್ರಕರಣಗಳಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು, ಪ್ರಸಕ್ತ ಸಾಲಿನಲ್ಲಿ 450 ಪ್ರಕರಣಗಳಲ್ಲಿ ಇಲಾಖೆ ತನ್ನ ಅಭಿಪ್ರಾಯವನ್ನು ತಿಳಿಸಿದೆ.

5. ಕರ್ನಾಟಕ ಸಿನಿಮಾ ನಿಯಂತ್ರಣ ಕಾಯ್ದೆಯನ್ವಯ ಇಲಾಖೆಯು ಈ ಎರಡು ವರ್ಷಗಳಲ್ಲಿ ಕ್ರಮವಾಗಿ 49 ಹಾಗೂ 41 ಪ್ರಕರಣಗಳಲ್ಲಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಅಭಿಪ್ರಾಯವನ್ನು ಕಳುಹಿಸಿದೆ.

## 14. ನಗರಾಭಿವೃದ್ಧಿ ಪ್ರಾಧಿಕಾರಗಳು

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸೇರಿದಂತೆ ರಾಜ್ಯದಲ್ಲಿ ಒಟ್ಟು 21 ನಗರಾಭಿವೃದ್ಧಿ ಪ್ರಾಧಿಕಾರಗಳಿವೆ(ಬೆಂಗಳೂರು ಪ್ರಾಧಿಕಾರವನ್ನು ಪ್ರತ್ಯೇಕವಾಗಿ ವಿಶ್ಲೇಷಿಸಲಾಗಿದೆ). ನಗರಾಭಿವೃದ್ಧಿ ಪ್ರಾಧಿಕಾರಗಳ ಹೆಸರು ಈ ಕೆಳಗಿನಂತಿದೆ.

| | |
|---|---|
| 1. ಬೆಳಗಾಂ | 11. ಕಾರವಾರ |
| 2. ಬಳ್ಳಾರಿ | 12. ಕೊಡಗು-ಮಡಿಕೇರಿ |
| 3. ಬೀದರ್ | 13. ಕೋಲಾರ |
| 4. ಬಿಜಾಪುರ | 14. ಕೆ.ಜಿ.ಎಫ್. |
| 5. ಚಿಕ್ಕಮಗಳೂರು | 15. ಮಂಡ್ಯ |
| 6. ಚಿತ್ರದುರ್ಗ | 16. ಮಂಗಳೂರು |
| 7. ದಾವಣಗೆರೆ | 17. ಮೈಸೂರು |
| 8. ಗುಲ್ಬರ್ಗಾ | 18. ರಾಯಚೂರು |
| 9. ಹಾಸನ | 19. ಶಿವಮೊಗ್ಗ |
| 10. ಹುಬ್ಬಳ್ಳಿ-ಧಾರವಾಡ | 20. ತುಮಕೂರು |

ಇವುಗಳಲ್ಲದೆ ಹೊಸಪೇಟೆಯಲ್ಲಿ ಅಭಿವೃದ್ಧಿ ಮಂಡಳಿ [illegible] ಹಾಗೂ ದಾಂಡೇಲಿ, ಗದಗ-ಬೆಟಗೇರಿ, [illegible] ಮತ್ತು ವಾಡಿ-ಶಹಾಬಾದಗಳಲ್ಲಿ ನಾಲ್ಕು ನಗರ ಯೋಜನಾ ಪ್ರಾಧಿಕಾರಗಳಿವೆ.

ಈ ನಗರಾಭಿವೃದ್ಧಿ ಪ್ರಾಧಿಕಾರಗಳ ಮತ್ತು ಪ್ರಾಧಿಕಾರಗಳು ಮತ್ತು ಉತ್ತಮ ಹಾಗೂ ಉನ್ನತ ಮಟ್ಟದ ನಗರಾಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಸೇವೆಗೊಳಪಟ್ಟ ಪ್ರದೇಶಗಳಲ್ಲಿ ಹೊಸ ಬಡಾವಣೆಗಳನ್ನು ಅಭಿವೃದ್ಧಿ ಹಾಗೂ ನಿವಾಸಕ್ಕೆ, ವಾಣಿಜ್ಯ ಮತ್ತು ಕೈಗಾರಿಕಾ ಪ್ರದೇಶಗಳಿಗೆ ನಿವೇಶನ ಒದಗಿಸುವುದು ಮತ್ತು ಇದೇ ರೀತಿಯ ಇತರೆ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ.

1994-95ನೇ ಸಾಲಿನಲ್ಲಿ ಕೈಗೊಂಡ ಮುಖ್ಯ ಯೋಜನೆಗಳ ಸಂಕ್ಷಿಪ್ತ ನೋಟವು ಮುಂದಿನ ಕಂಡಿಕೆಗಳಲ್ಲಿ ವಿವರಿಸಲಾಗಿದೆ.

14.1 <u>ಬೆಳಗಾಂ:</u>- 1988ರಲ್ಲಿ ಅಸ್ತಿತ್ವಕ್ಕೆ ಬಂದ ಬೆಳಗಾಂ ಪ್ರಾಧಿಕಾರವು ಬೆಳಗಾಂ ಸ್ಥಳೀಯ ಯೋಜನಾ ಪ್ರದೇಶದ ಅಧಿಕಾರ ವ್ಯಾಪ್ತಿ ಹೊಂದಿರುತ್ತದೆ. ಇದರ ವಿಸ್ತೀರ್ಣ 182.07 ಚ.ಕಿ.ಮೀ. ಇರುತ್ತದೆ.

ಬೆಳಗಾಂ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಸರ್ಕಾರದಿಂದ ಅನುದಾನ ಮಂಜೂರಾತಿ ದೊರೆತಿರುವುದಿಲ್ಲ.

ಪ್ರಾಧಿಕಾರದ 1994-95ನೇ ಸಾಲಿನ ಆದಾಯ ಮತ್ತು ವೆಚ್ಚ ಈ ಕೆಳಗಿನಂತಿದೆ.

| | |
|---|---|
| ಆದಾಯ | : ರೂ.148.61 ಲಕ್ಷ |
| ವೆಚ್ಚ | : ರೂ.112.56 ಲಕ್ಷ |

ನೀರು ಸರಬರಾಜು ಸೇವೆ, ಅಭಿವೃದ್ಧಿ ಯೋಜನೆಗಳು(ಶೇ.88) ಮತ್ತು ಸಿಬ್ಬಂದಿ ಹಾಗೂ ಸಾದಿಲ್ವಾರ ಇತರೆ(ಶೇ.6) ವೆಚ್ಚಗಳು.

ಪ್ರಾಧಿಕಾರದ ಬೇಡಿಕೆ, ವಸೂಲಿ ಹಾಗೂ ಬಾಕಿ ಈ ಕೆಳಕಂಡಂತಿದೆ.

| | |
|---|---|
| ಬೇಡಿಕೆ | : ರೂ. 568.53 ಲಕ್ಷ |
| ವಸೂಲಿ | : ರೂ. 242.36 ಲಕ್ಷ |
| ಬಾಕಿ | : ರೂ. 326.17 ಲಕ್ಷ |

ವಸೂಲಾತಿಯು ಬೇಡಿಕೆಯ ಶೇಕಡ 43 ರಷ್ಟಿರುತ್ತದೆ.

ನಿವೇಶನಗಳ ವಿವರ:- ಪ್ರಾಧಿಕಾರವು ನಿವೇಶನ ಹಂಚಿಕೆಯಲ್ಲಿ ಶೇಕಡ 18 ರಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ನಿಗದಿಪಡಿಸಿಲ್ಲವಾದರೂ ಸಹ ನಿವೇಶನಗಳ ಹಂಚಿಕೆ ಸಮಯದಲ್ಲಿ ಅರ್ಹ ಅಭ್ಯರ್ಥಿಗಳಿಗೆ ಆದ್ಯತೆಯನ್ನು ಕೊಡಲಾಗುತ್ತದೆ. ಪ್ರಸಕ್ತ ಸಾಲಿನಲ್ಲಿ ಪ್ರಾಧಿಕಾರವು 1283 ನಿವೇಶನಗಳನ್ನು ಹಂಚಿಕೆ ಮಾಡಿರುವುದರ ಜೊತೆಗೆ 265 ವುಂಬಾಲೆ ನಿವೇಶನಗಳು ಹಂಚಿಕೆಗೆ ಇವೆ.

ಅಭಿವೃದ್ಧಿ ಕಾರ್ಯಗಳು:- ಪ್ರಾಧಿಕಾರವು ವಾಣಿಜ್ಯ ಸಂಕೀರ್ಣವನ್ನು ಕಟ್ಟಲು ರೀಪಿಕೋನ್ಸ್, ಹೌಸಿಂಗ್ ಹತ್ತಿರ 66, ಅಂಗಡಿಗಳು, ಪೋಸ್ಟ್ ಆಫೀಸ್ ಹಾಗೂ ಇತರ ಕೆಲಸಗಳಿಗೆ ರೂ.49.73 ಲಕ್ಷ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಕೈಗೆತ್ತಿಕೊಂಡಿದ್ದು ಕೆಲಸವು ಮಾರ್ಚ್ 1995ರಲ್ಲಿ ಮುಗಿಯುವ ನಿರೀಕ್ಷೆಯಿದೆ.

ಪ್ರಾಧಿಕಾರವು ರಸ್ತೆ, ಗಟಾರ ನಿರ್ಮಾಣ, ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಆಯುಕ್ತರ, ಕಾವಲುಗಾರ ಮತ್ತು ವಾಹನ ಚಾಲಕರ ವಸತಿ ಗೃಹಗಳ ನಿರ್ಮಾಣ ಕಾರ್ಯ ಕೈಗೆತ್ತಿಕೊಳ್ಳಲಾಗಿದೆ. ನೀರು ಪೂರೈಕೆ ಸಲುವಾಗಿ ಹಿಡಕಲ್ ಅಣೆಕಟ್ಟು ನಿರ್ಮಾಣ ಕಾರ್ಯಕ್ಕೆ ಪ್ರಾಧಾನ್ಯತೆ ಕೊಡಲಾಗಿದೆ. ಪ್ರಾಧಿಕಾರದ ಕಛೇರಿಯಲ್ಲಿ ಕೆಲಸದ ಒತ್ತಡ ಹೆಚ್ಚಿರುವುದರಿಂದ ಕೆಲಸವು ಶೀಘ್ರಗತಿಯಲ್ಲಿ ಪ್ರಗತಿ ಸಾಧಿಸಲು ಗಣಕ ಯಂತ್ರವನ್ನು ಕಛೇರಿಯಲ್ಲಿ ಅಳವಡಿಸಲಾಗಿದೆ.

ರೂ.4489.07 ಲಕ್ಷ ರೂ.ಗಳ ಅಂದಾಜು ವೆಚ್ಚದಲ್ಲಿ 381.63 ಹೆಕ್ಟೇರ ಜಮೀನಿನಲ್ಲಿ 10,652 ಪ್ಲಾಟುಗಳ ನಿರ್ಮಾಣ ಮಾಡಲು ಬೆಳಗಾಂ ಅಭಿವೃದ್ಧಿ ಪ್ರಾಧಿಕಾರವು 8 ಯೋಜನೆಗಳಿಗೆ ಸರ್ಕಾರದ ಮಂಜೂರಾತಿ ದೊರೆತಿದೆ.

5817 ಪ್ಲಾಟುಗಳ ನಿರ್ಮಾಣಕ್ಕೆ ಕಣಬರ್ಗಿ ಯೋಜನೆಯನ್ನು ಸರ್ಕಾರದ ಮಂಜೂರಾತಿಗಾಗಿ ಸಲ್ಲಿಸಲಾಗಿದೆ. ಅದೇ ರೀತಿ ಕಂಗ್ರಾಳಿ ಬಿ.ಕೆ. ಕಂಗ್ರಾಳಿ ಕೆ.ಹೆಚ್. ಯೋಜನೆಗಳನ್ನು ಸುಮಾರು 500 ಎಕರೆ ವಿಸ್ತೀರ್ಣದಲ್ಲಿ ಕಾರ್ಯಕ್ರಮವನ್ನು ಹಾಕಿಕೊಳ್ಳಲಾಗಿದೆ.

ಬೆಳಗಾಂ ಸ್ಥಳೀಯ ಯೋಜನಾ ಪ್ರದೇಶಕ್ಕೆ ಪರಿಷ್ಕೃತ ವ್ಯಾಪಕಾಭಿವೃದ್ಧಿ ಯೋಜನೆಗೆ ಸರ್ಕಾರದ ಅನುಮೋದನೆ ನೀಡಿದೆ.

ಇತರೆ ಚಟುವಟಿಕೆಗಳು:-

1) ಬೆಳಗಾವಿಯ ಕಣಬರ್ಗಿ ಗ್ರಾಮದ ರಿ.ಸ.ನಂ.533 ಮತ್ತು ಮುಂತಾದವುಗಳನ್ನೊಳಗೊಂಡ 136.12 ಹೆಕ್ಟೇರ ಜಮೀನಿಗೆ ವಸತಿ ಯೋಜನೆ ನಂ.35 ಮತ್ತು 13-ಎ ಗೆ ನಕ್ಷೆ ತಯಾರಿಸಿ ಕೊಟ್ಟಿದೆ.

2) ಬೆಳಗಾವಿ ಗ್ರಾಮದ ರಿ.ಸ.ನಂ.61 ಲಕ್ಷ್ಮೀ ಟೇಕ ಒಳಗೊಂಡಂತೆ 16.08 ಹೆಕ್ಟೇರ ಜಮೀನಿಗೆ ವಸತಿ ಯೋಜನೆಗೆ ನಕ್ಷೆ ತಯಾರಿಸಲಾಗಿದೆ.

3) ಸುಮಾರು 8.5 ಹೆಕ್ಟೇರ ಕ್ಷೇತ್ರ ಒಳಗೊಂಡಂತೆ ಒಟ್ಟು 5 ಖಾಸಗಿ ವಿನ್ಯಾಸಗಳಿಗೆ ಮಂಜೂರಾತಿ ದೊರೆತಿದ್ದು, ಈ ವಿನ್ಯಾಸಗಳಲ್ಲಿ 324 ನಿವೇಶನಗಳಿಗೆ ಅನುಮೋದನೆ ನೀಡಲಾಗಿದೆ.

4) 37 ಏಕ ನಿವೇಶನಗಳಿಗೆ ಅನುಮೋದನೆ ನೀಡಲಾಗಿದೆ.

5) 107 ಭೂ ಬಳಕೆ ಪ್ರಮಾಣ ಪತ್ರಗಳನ್ನು ನೀಡಲಾಗಿದೆ. 220 ಪ್ರಮಾಣೀಕೃತ ನಕ್ಷೆಗಳನ್ನು ನೀಡಲಾಗಿದೆ.

6) 150 ಪ್ರಕರಣಗಳಲ್ಲಿ ಕಟ್ಟಡಗಳನ್ನು ಕಟ್ಟಲು ಪ್ರಾರಂಭಿಕ ಪ್ರಮಾಣ ಪತ್ರಗಳನ್ನು ನೀಡಲಾಗಿದೆ.

14.2 ಬಳ್ಳಾರಿ:-

ಸರ್ಕಾರವು ಘೋಷಿಸಿರುವ ನಗರಾಭಿವೃದ್ಧಿ ಪ್ರಾಧಿಕಾರವನ್ನು ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರವು [illegible] 1988ರಲ್ಲಿ ಅಸ್ತಿತ್ವಕ್ಕೆ ಬಂದ ಈ ಪ್ರಾಧಿಕಾರವು 1149.28 ಚ.ಕಿ.ಮೀ. ವಿಸ್ತೀರ್ಣದಿಂದ ಕೂಡಿದ್ದು, 1991ರ ಜನಗಣತಿ ಪ್ರಕಾರ ಇದರ ಜನಸಂಖ್ಯೆಯು 2,45,000 ಎಂದು ತಿಳಿದು ಬರುತ್ತದೆ.

ಬಳ್ಳಾರಿಯ ವ್ಯಾಪಕಾಭಿವೃದ್ಧಿ ಯೋಜನೆಯಂತೆ ಪ್ರಾಧಿಕಾರದ ವಿಸ್ತೀರ್ಣದ ವಿವರ ಈ ಕೆಳಗಿನಂತಿದೆ:-

| | |
|---|---|
| 1. ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರ | : 39.31 ಚ.ಕಿ.ಮೀ. |
| 2. ಹೊಸಪೇಟೆ | : 20.00 ಚ.ಕಿ.ಮೀ. |
| 3. ಸಂಡೂರು | : 6.97 ಚ.ಕಿ.ಮೀ. |
| 4. ಕಮಲಾಪುರ | : 3.00 ಚ.ಕಿ.ಮೀ. |
| 5. ವಿಜಯನಗರ ಅಭಿವೃದ್ಧಿ ಯೋಜನಾ ಪ್ರದೇಶ. | :1080.00 ಚ.ಕಿ.ಮೀ. |
| | 1149.28 ಚ.ಕಿ.ಮೀ. |

ಬಳ್ಳಾರಿ, ಹೊಸಪೇಟೆ, ಸಂಡೂರು ಮತ್ತು ಕಮಲಾಪುರ ಗ್ರಾಮಗಳ ಸಮಗ್ರಾಭಿವೃದ್ಧಿ ಯೋಜನೆಯ ಕಾರ್ಯವನ್ನು ಈ ಅಭಿವೃದ್ಧಿ ಪ್ರಾಧಿಕಾರ ವಹಿಸಿಕೊಂಡಿರುತ್ತದೆ. ಅಲ್ಲದೆ, ಕಾಯಿದೆಗನುಸಾರವಾಗಿ ಪ್ರಾಧಿಕಾರವು ವ್ಯಾಪಕಾಭಿವೃದ್ಧಿ ಯೋಜನೆಯ ನಕ್ಷೆಯನ್ನು ರಚಿಸುವದರಲ್ಲಿ ಕಾರ್ಯೋನ್ಮುಖವಾಗಿದೆ.

| | | |
|---|---|---|
| ಆದಾಯ | : | ರೂ. 584.86 ಲಕ್ಷ |
| ಖರ್ಚು | : | ರೂ. 575.48 ಲಕ್ಷ |

ಅಭಿವೃದ್ಧಿ ಕಾರ್ಯಕ್ರಮಗಳು:—

(ಅ) 101 ಎಕರೆ ವಿಸ್ತೀರ್ಣವುಳ್ಳ ಜಮೀನಿನಲ್ಲಿ ಒಟ್ಟು 112 ಲಕ್ಷ ರೂ. ವೆಚ್ಚದಲ್ಲಿ ರಾಘವೇಂದ್ರ ಕಾಲೋನಿಯ 2ನೇ ಹಂತ ಬಡಾವಣೆಯಲ್ಲಿ 1291 ನಿವೇಶನಗಳನ್ನು ವಿತರಿಸಲಾಗಿದೆ.

(ಆ) ವೆಂಕಟರಮಣನಗರ ಬಡಾವಣೆಯಲ್ಲಿ 10 ಎಕರೆ ಜಮೀನಿನಲ್ಲಿ ಉದ್ಯಾನ ರಚನೆಯ ಕಾರ್ಯವನ್ನು ಪ್ರಾಧಿಕಾರವು ಯೋಜಿಸುತ್ತಿದೆ.

(ಇ) ಇದಲ್ಲದೆ ಪ್ರಾಧಿಕಾರವು ಖಾಸಗಿ ಕ್ಷೇತ್ರದಲ್ಲಿ 5 ವಸತಿ ವಿನ್ಯಾಸಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮುಗಿಸಿ, ಸುವ್ಯವಸ್ಥಿತ ರೀತಿಯಲ್ಲಿ ಕಾರ್ಯ ಜರುಗಿಸುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

(ಈ) ಪೂರ್ಣಗೊಂಡ ಅಭಿವೃದ್ಧಿ ಕಾರ್ಯಕ್ರಮಗಳ ವಿವರ ಈ ಕೆಳಗಿನ ತಃಖ್ತೆಯಲ್ಲಿ ನೀಡಿದೆ:—

ಸಾರ್ವಜನಿಕ ಉಪಯೋಗದ ಈ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದು ಅವುಗಳನ್ನು ಪ್ರಾಧಿಕಾರದ ವೆಚ್ಚದಿಂದಲೇ ನಿರ್ವಹಿಸಲಾಗಿರುತ್ತದೆ.

| | ವೆಚ್ಚ (ರೂ.ಲಕ್ಷಗಳಲ್ಲಿ) |
|---|---|
| (1) ಗಣೇಶ ಕಾಲೋನಿಯಲ್ಲಿನ ಚರಂಡಿಗೆ ಕಲ್ವರ್ಟ್ ಮಾಡಿಸಲಾಗಿದೆ. | 6.00 |
| (2) ದುರ್ಗಮ್ಮ ಗುಡಿಯ ಹತ್ತಿರವಿರುವ ರಸ್ತೆಯನ್ನು ರಿಪೇರಿ ಮಾಡಿಸಲಾಗಿರುತ್ತದೆ. | 1.75 |
| (3) ಸಿಗ್ನಲ್ ಲೈಟ್ಸ್ ಗಡಿಗಿ ಚನ್ನಪ್ಪ ಸರ್ಕಲ್‌ನಲ್ಲಿ ಅಳವಡಿಸಲಾಗಿರುತ್ತದೆ. | 2.50 |
| (4) ಬಳ್ಳಾರಿ ತಾಲ್ಲೂಕ ಟಿ.ಎಸ್.ನಂ.28:1 ನಲ್ಲಿರುವ ಪ್ರದೇಶದಲ್ಲಿ ಶಾದಿಮಹಲ್ ಪಕ್ಕದಲ್ಲಿ ಒಟ್ಟು 400 ಅಡಿ ಉದ್ದದ ಕಾಂಪೌಂಡ್ ಗೋಡೆ ನಿರ್ಮಿಸಲಾಗಿರುತ್ತದೆ. | 1.70 |
| (5) ನಲ್ಲಿರುವ ಪ್ರದೇಶದಲ್ಲಿ 600 ಅಡಿ ಉದ್ದದ ರಸ್ತೆಯನ್ನು ನಿರ್ಮಿಸಲಾಗಿದೆ. | 3.60 |
| (6) ನಲ್ಲಿರುವ ಪ್ರದೇಶದಲ್ಲಿ 300 ಅಡಿ. ಉದ್ದದ ಚರಂಡಿಯನ್ನು ನಿರ್ಮಿಸಲಾಗಿದೆ. | 1.80 |
| (7) [illegible] ಬಳಿಯ ಕೋಟೆ ಪ್ರದೇಶದಲ್ಲಿ ಸಾರ್ವಜನಿಕ ಶೌಚಾಲಯವನ್ನು ಲ್ಯಾಂಡ್ ಆರ್ಮಿ ರವರ ಮುಖಾಂತರ ನಿರ್ಮಿಸಲಾಗಿದೆ. | 1.21 |

ವೆಚ್ಚ
(ರೂ. ಲಕ್ಷಗಳಲ್ಲಿ)

| | | |
|---|---|---|
| (8) | ಬಳ್ಳಾರಿ ಪಟ್ಟಣದ ಟಿ.ಎಸ್.ನಂ.28:1 ನಲ್ಲಚೆರುವು ಪ್ರದೇಶದಲ್ಲಿ ಹೆಚ್.ಎಲ್.ಸಿ. ವೃತ್ತದಿಂದ ಇಳಿಜಾರು ರಸ್ತೆ ರ್‍ಯಾಂಪ್ ಕಾಮಗಾರಿಯನ್ನು ಪ್ರಾಧಿಕಾರದ ವತಿಯಿಂದ ಕೈಗೊಂಡು ಪೂರ್ಣಗೊಳಿಸಲಾಗಿದೆ. | 1.75 |
| (9) | ಬಾಲಭವನ ಅಭಿವೃದ್ಧಿ | 8.23 |
| (10) | ಬಳ್ಳಾರಿ ನಗರಾಭಿವೃದ್ಧಿ ಪ್ರಾಧಿಕಾರದ ಕಛೇರಿ ಕಟ್ಟಡ. | 16.00 |
| (11) | ಕುವೆಂಪು ನಗರ ಬಡಾವಣೆ | 150.00 |
| (12) | ರಾಘವೇಂದ್ರ ಕಾಲೋನಿ 2ನೇ ಹಂತ ಬಡಾವಣೆ. | 112.00 |
| | ಒಟ್ಟು | ರೂ 306.64 ಲಕ್ಷ |

ಇದಲ್ಲದೆ ಜಿಲ್ಲಾ ಆಡಳಿತ ಸಮಿತಿಯ ನಿರ್ದೇಶನದ ಮೇರೆಗೆ ಪ್ರಾಧಿಕಾರದ 'ನಲ್ಲಚೆರುವು' ಪ್ರದೇಶದಲ್ಲಿ 5-00 ಎಕರೆ ಜಮೀನಿನಲ್ಲಿ ಬಾಲಭವನ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಂಡಿದೆ. ಈ ಕಾರ್ಯಕ್ರಮದಡಿಯಲ್ಲಿ ಒಟ್ಟು ರೂ.8.23 ಲಕ್ಷಗಳನ್ನು ಖರ್ಚು ಮಾಡಿದ್ದು ಖರ್ಚಿನ ವಿವರ ಈ ರೀತಿ ಇದೆ:-

(ಅ) ಸಮೂಹಬಾಗ್ರದ ಹುಲ್ಲಿನ ನಿರ್ಮಾಣ : ರೂ.2.37 ಲಕ್ಷ
(ಆ) ವರ್ಣರಂಜಿತ ನೀರಿನ ಕಾರಂಜಿ : ರೂ.0.80 ಲಕ್ಷ
(ಇ) ರಸ್ತೆ ನಿರ್ಮಾಣ : ರೂ.1.53 ಲಕ್ಷ
(ಈ) ವಿದ್ಯುಚ್ಛಕ್ತಿ ವ್ಯವಸ್ಥೆ : ರೂ.1.50 ಲಕ್ಷ
(ಉ) ನೀರಿನ ವ್ಯವಸ್ಥೆ : ರೂ.0.67 ಲಕ್ಷ
(ಊ) ಆಟದ ಸಾಮಾನು : ರೂ.1.36 ಲಕ್ಷ

14.3 ಬೀದರ:-

ಬೀದರ ಅಭಿವೃದ್ಧಿ ಪ್ರಾಧಿಕಾರದ ಬೇಡಿಕೆ, ವಸೂಲಿ ಮತ್ತು ಬಾಕಿ ಈ ಕೆಳಕಂಡಂತಿದೆ:-

ಬೇಡಿಕೆ : ರೂ. 397.55 ಲಕ್ಷ
ವಸೂಲಿ : ರೂ. 11.55 ಲಕ್ಷ
ಬಾಕಿ : ರೂ. 388.00 ಲಕ್ಷ

ಈ ಕೆಳಕಂಡ ಯೋಜನೆಗೆ ಹೊರಡಿಸಿರುವ ಅಂತಿಮ ಅಧಿಸೂಚನೆ ಪ್ರಾಧಿಕಾರದ ಏಕೈಕ ಸಾಧನೆ.

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ವಿಸ್ತೀರ್ಣ | ಒಟ್ಟು ನಿವೇಶನಗಳ ಸಂಖ್ಯೆ | ಯೋಜನೆಯ ಒಟ್ಟು ಮೊತ್ತ |
|---|---|---|---|---|
| | | ಎಕರೆ-ಗುಂಟೆ | | |
| 1. | ನೌಬಾದ | 29-05 | 331 | 146.38 ಲಕ್ಷ |
| 2. | ಚಿದ್ರಿ | 36-16 | 335 | 148.38 ಲಕ್ಷ |
| 3. | ಅಲಿಯಾಬಾದ | 24-18 | 254 | 108.73 ಲಕ್ಷ |

14.4 ಬಿಜಾಪುರ:-

ಬಿಜಾಪುರ ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರ:-

(ಅ) ಆದಾಯ : ರೂ. 114.29(ಡಿಸೆಂಬರ್ 94ರ ಅಂತ್ಯದವರೆಗೆ)

(ಆ) ವೆಚ್ಚ : ರೂ. 149.50

ಈಗಾಗಲೇ ಪ್ರಾಧಿಕಾರದಲ್ಲಿನ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಣ ಖರ್ಚಾಗುತ್ತಿದ್ದು, ಹೊಸ ಕಾರ್ಯಕ್ರಮಗಳಿಗೆ ಪ್ರಾಧಿಕಾರ ಸರ್ವ ಯತ್ನವನ್ನು ಮಾಡುತ್ತಿದೆ. ಶೇಕಡ 18ರ ಅನುದಾನ ಕಾದಿರಿಸಲ್ಪಾದರೂ ಸಹ ಅರ್ಹ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುತ್ತಿದೆ.

192 ಎಕರೆ 14 ಗುಂಟೆ ಜಮೀನನ್ನು ವಶಪಡಿಸಿಕೊಳ್ಳಲು ಸರ್ಕಾರದ ಅನುಮೋದನೆ ದೊರೆತಿದ್ದು 10 ಎಕರೆ 04 ಗುಂಟೆ ಜಮೀನಿನಲ್ಲಿ ನಿವೇಶನ ಕಾರ್ಯಕ್ರಮ ಈಗಾಗಲೇ ಮುಗಿದಿದೆ. ರೂ.2.00 ಕೋಟಿ ಅಂದಾಜು ವೆಚ್ಚದಲ್ಲಿ ಪ್ರಾಧಿಕಾರವು ಬಿಜಾಪುರ ನಗರಕ್ಕೆ ನೀರಿನ ಸೌಕರ್ಯ ಕಲ್ಪಿಸಿಕೊಡುವ ಯೋಜನೆಯನ್ನು ಹಾಕಿಕೊಂಡಿದೆ.

ಪ್ರಾಧಿಕಾರದ ಕಾಂಪ್ರಹೆನ್ಸಿವ್ ಅಭಿವೃದ್ಧಿ ಯೋಜನೆ ಪೂರ್ಣಗೊಂಡಿದೆ. 13,22,635 ರೂ.ವೆಚ್ಚದಲ್ಲಿ ನಾಲ್ಕು ಶಾಪ್ ಕಾಂಪ್ಲೆಕ್ಸ್‌ಗಳನ್ನು ಪ್ರಾಧಿಕಾರವು ಕಟ್ಟಿದೆ. ಖಾಸಗಿ ಕ್ಷೇತ್ರದಲ್ಲಿ 22 ಬಡಾವಣೆಗಳ ರಚನೆಯನ್ನು ಮಾಡಿದೆ.

1,63,524 ರೂ.ವೆಚ್ಚದಲ್ಲಿ ಪ್ರಾಧಿಕಾರವು ಒಳಚರಂಡಿ ಕಾರ್ಯಕ್ರಮವನ್ನು ಪೂರೈಸಿದೆ.

14.5 ಚಿಕ್ಕಮಗಳೂರು:-

ಚಿಕ್ಕಮಗಳೂರು ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ವೆಚ್ಚದ ವಿವರ:-

ಆದಾಯ : ರೂ. 960.50 ಲಕ್ಷ
ವೆಚ್ಚ : ರೂ. 934.86 ಲಕ್ಷ

ಶೇಕಡ 18ರ ಮೀಸಲಾತಿಯ ಅಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ 20' X 30' ಚ.ಅಡಿ ನಿವೇಶನವನ್ನು ಹಂಚಿದೆ.

2026 ವಸತಿ ನಿವೇಶನಗಳನ್ನು ಕಲ್ಪಿಸಿ ಕೊಡುವ ಕೋಟೆಕೆರೆ ಹೊಸ ಯೋಜನೆಯನ್ನು ನಿರೂಪಿಸುವಂತೆ ಕಾರ್ಯಕ್ರಮ ಹಾಕಿಕೊಂಡಿದೆ. ಇದರಡಿಯಲ್ಲಿ 140 ಎಕರೆ ಜಮೀನನ್ನು ಪ್ರಾಧಿಕಾರ ಸ್ವಾಧೀನ ಪಡಿಸಿಕೊಂಡಿದೆ.

4.00 ಕೋಟಿ ರೂಪಾಯಿ ವೆಚ್ಚದಲ್ಲಿ 200 ಎಂ.ಐ.ಜಿ. ಮನೆಗಳ ನಿರ್ಮಾಣ ಕಾರ್ಯಕ್ರಮವನ್ನು ಪ್ರಾಧಿಕಾರವು ಯೋಜಿಸಿದೆ. ಇದಲ್ಲದೆ ಪ್ರಾಧಿಕಾರವು 30 X 40 ಹಾಗೂ 30 X 50 ಮನೆ ನಿರ್ಮಾಣಗಳ ಕಾರ್ಯಕ್ರಮ ಯೋಜನೆಯನ್ನು ಸಹ ಯೋಜಿಸಿದೆ.

14.6 ಚಿತ್ರದುರ್ಗ:—

ಚಿತ್ರದುರ್ಗ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯು ಚಿತ್ರದುರ್ಗ ಪುರಸಭೆ ಸುತ್ತಮುತ್ತಲ 21 ಕಂದಾಯ ಗ್ರಾಮಗಳಿಂದ ಕೂಡಿರುತ್ತದೆ. ಪ್ರಾಧಿಕಾರವು 1988ರಲ್ಲಿ ಅಸ್ತಿತ್ವಕ್ಕೆ ಬಂದಿತು.

| | | |
|---|---|---|
| ಆದಾಯ | : | ರೂ. 13.60 ಲಕ್ಷ |
| ವೆಚ್ಚ | : | ರೂ. 33.44 ಲಕ್ಷ |

ಪ್ರಾಧಿಕಾರವು ಕಟ್ಟಡಗಳಿಗಾಗಿ 381 ಪ್ರಾರಂಭಿಕ ಪ್ರಮಾಣ ಪತ್ರವನ್ನು ವಿತರಿಸಿರುತ್ತದೆ.

14.7 ದಾವಣಗೆರೆ:—

ದಾವಣಗೆರೆ ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರಣೆ:—

| | | |
|---|---|---|
| ಆದಾಯ | : | ರೂ. 40.35 ಲಕ್ಷ |
| ವೆಚ್ಚ | : | ರೂ. 52.88 ಲಕ್ಷ |

| | | |
|---|---|---|
| ಪ್ರಾಧಿಕಾರದ ಬೇಡಿಕೆ | : | ರೂ. 34.10 ಲಕ್ಷ |
| ವಸೂಲಿ | : | ರೂ. 13.33 ಲಕ್ಷ |
| ಬಾಕಿ | : | ರೂ. 20.77 ಲಕ್ಷ |

ಪ್ರಾಧಿಕಾರದ ಸಮಗ್ರ ಯೋಜನೆಗೆ ಸರ್ಕಾರ ಅನುಮೋದನೆ ನೀಡಿದೆ. ಮೂಲಭೂತ ಸೌಕರ್ಯ ಕಾರ್ಯಕ್ರಮಗಳನ್ನು ಮಾತ್ರ ಪ್ರಾಧಿಕಾರವು ಜಾರಿಗೊಳಿಸುತ್ತಾ ಬಂದಿದೆ.

14.8 ಗುಲ್ಬರ್ಗಾ:—

ಗುಲ್ಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರಣೆ:—

| | | |
|---|---|---|
| ಆದಾಯ | : | ರೂ. 261.01 ಲಕ್ಷ |
| ವೆಚ್ಚ | : | ರೂ. 229.67 ಲಕ್ಷ |
| ಪ್ರಗತಿ | : | ಶೇಕಡ 88 |

ಬೇಡಿಕೆ ಮತ್ತು ವಸೂಲಿ:—

| | | |
|---|---|---|
| ಬೇಡಿಕೆ | : | ರೂ.1204.29 ಲಕ್ಷ |
| ವಸೂಲಿ | : | ರೂ.221.59 ಲಕ್ಷ |
| ಬಾಕಿ | : | ರೂ. 982.70 ಲಕ್ಷ |

ಅಭಿವೃದ್ಧಿ ಕಾರ್ಯಕ್ರಮ:—

ಪ್ರಸಕ್ತ ಸಾಲಿನಲ್ಲಿ ಪ್ರಾಧಿಕಾರವು ಈ ಕೆಳಕಂಡ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು.

(ಅ) ಅರ್ಧ ಎಕರೆ ಜಮೀನನ್ನು ಖರೀದಿಸಿದ್ದು ಪ್ರಾಧಿಕಾರವು ನಿವೇಶನಗಳ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ರಸ್ತೆ ನಿರ್ಮಾಣ ಕಾರ್ಯಕ್ರಮವು ಪ್ರಾರಂಭವಾಗಿದ್ದು ಕಲ್ವರ್ಟ್ ಮತ್ತು ನೀರು, ವಿದ್ಯುಚ್ಛಕ್ತಿಯ ಕೆಲಸಗಳು ಪ್ರಾರಂಭವಾಗಿವೆ.

(ಆ) ಬ್ರಹ್ಮಪುರದ ಸರ್ವೆ ನಂ.106 ಮತ್ತು 107ರಲ್ಲಿ 34 ಎಕರೆ 29 ಗುಂಟೆ ಜಾಗದಲ್ಲಿ 564 ನಿವೇಶನಗಳನ್ನು ನಿರ್ಮಿಸಿ, ಈಗಾಗಲೇ ಗುರುತಿಸಿರುವ ಫಲಾನುಭವಿಗಳಿಗೆ ಅವನ್ನು ವಿತರಿಸಲಾಗಿದೆ.

(ಇ) ಮತ್ತೆ ಶೇಷ ರೋಜಾ ಗ್ರಾಮದ ಬಳಿ 6 ಎಕರೆ 16 ಗುಂಟೆ ಜಮೀನಿನಲ್ಲಿ 151 ನಿವೇಶನಗಳನ್ನು ನಿರ್ಮಿಸಲು ಕಾರ್ಯ ಪ್ರಾರಂಭವಾಗಿದೆ.

(ಈ) ಶೇಷ ರೋಜಾ— ಎರಡನೇ ಹಂತದ ಅಭಿವೃದ್ಧಿ ಕಾರ್ಯಕ್ರಮ:—

ಎರಡನೇ ಹಂತದಲ್ಲಿ ಪ್ರಾಧಿಕಾರವು 21 ಎಕರೆ 27 ಗುಂಟೆ ಜಮೀನನ್ನು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸ್ವಾಧೀನ ಪಡಿಸಿಕೊಳ್ಳುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ

(ಉ) ರಾಜಾಪುರ ಮತ್ತೆ ಬಟೇಪುರ ಅಭಿವೃದ್ಧಿ ಯೋಜನೆಗಳ ಕಾರ್ಯಕ್ರಮಗಳು ಪ್ರಾರಂಭವಾಗಿದ್ದು ಪ್ರಗತಿ ವಿವಿಧ ಹಂತಗಳಲ್ಲಿವೆ.

(ಊ) ಸಾರ್ವಜನಿಕರ ಸೌಲಭ್ಯಕ್ಕೆಂದು ಪ್ರಾಧಿಕಾರವು ಜನತಾ ಬಜಾರ್ ಬಳಿ ರೂ.2.20 ಲಕ್ಷ ವೆಚ್ಚದಲ್ಲಿ ''ತಂಪು ಪಾನೀಯ'' ನೀರಿನ ಕೇಂದ್ರವನ್ನು ನಿರ್ಮಿಸಿದೆ.

14.9 ಹಾಸನ:—

ಹಾಸನ ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರ:—

| | |
|---|---|
| ಬೇಡಿಕೆ | : ರೂ 560.43 ಲಕ್ಷ |
| ವಸೂಲಾತಿ | : ರೂ 543.63 ಲಕ್ಷ |
| ಬಾಕಿ | : ರೂ. 16.80 ಲಕ್ಷ |
| ಶೇಕಡ 97 | |

(1) ಉದ್ಯಾನವನಗಳ ಬೆಳವಣಿಗೆಗಾಗಿ ಪ್ರಾಧಿಕಾರ ಸ್ಥಳ ನಿರೀಕ್ಷಣೆ ನಡೆಸಿದೆ.

(2) ಪ್ರಾಧಿಕಾರವು ಕೆ.ಎಸ್.ಆರ್.ಟಿ.ಸಿ.ಬಸ್ ನಿಲ್ದಾಣದಲ್ಲಿ ಒಂದು ಉದ್ಯಾನವನವನ್ನು ನಿರ್ಮಿಸಿದೆ.

ಅಭಿವೃದ್ಧಿ ಕಾರ್ಯಕ್ರಮಗಳು:-

ಪ್ರಾರಂಭದಿಂದಲೂ ಪ್ರಾಧಿಕಾರವು 35 ಬಡಾವಣೆಗಳನ್ನು ರಚಿಸಿರುವ ರೂ.50.41 ಲಕ್ಷ ವೆಚ್ಚದಲ್ಲಿ ರೂಪಿಸಿದ 17 ಬಡಾವಣೆಗಳ ಕಾರ್ಯಕ್ರಮವು ಪೂರ್ಣಗೊಳಿಸಿ ಹುಬ್ಬಳ್ಳಿ-ಧಾರವಾಡ ಮುನಿಸಿಪಾಲಿಟಿಗೆ ಹಸ್ತಾಂತರ ಮಾಡಿದೆ. ಇದಕ್ಕೆ ತಗಲುವ ಒಟ್ಟು ವೆಚ್ಚ 236.33 ಲಕ್ಷ. ಖಾಸಗಿ ಕ್ಷೇತ್ರದಲ್ಲಿ ಒಟ್ಟು 37 ಬಡಾವಣೆಗಳನ್ನು ರೂಪಿಸಿದ್ದು ಅವುಗಳ ಅನುಮೋದನೆ ಅಂಗೀಕಾರವನ್ನು ಪಡೆದಿದೆ. ಸುಮಾರು 1935 ನಿವೇಶನಗಳನ್ನು ಅಳವಡಿಸುವ ಸಾಧ್ಯತೆಯಿದೆ. 3042 ಎಕರೆ ಜಮೀನಿನ ಸ್ವಾಧೀನತೆಗೆಂದು ಕಾರ್ಯಪ್ರಾರಂಭಗೊಂಡಿದೆ. ಸುಮಾರು 44,200 ನಿವೇಶನಗಳನ್ನು ರೂಪಿಸಬಹುದು.

ಪ್ರಾಧಿಕಾರದ ಆದಾಯ ಮತ್ತು ವೆಚ್ಚ ಈ ಕೆಳಕಂಡಂತಿದೆ:-

| | | |
|---|---|---|
| ಆದಾಯ | : | ರೂ.206.08 ಲಕ್ಷ |
| ವೆಚ್ಚ | : | ರೂ.253.98 ಲಕ್ಷ |
| ಬೇಡಿಕೆ | : | ರೂ.776.50 ಲಕ್ಷ |
| ವಸೂಲಾತಿ | : | ರೂ.443.76 ಲಕ್ಷ |
| ಬಾಕಿ | : | ರೂ.332.74 ಲಕ್ಷ |

ಶೇಕಡ 18ರ ಕಾಯ್ದಿರಿಸಲಾದ ಯೋಜನೆಯಲ್ಲಿ ಯಾವುದೇ ಪ್ರಗತಿ ಇರುವುದಿಲ್ಲ.

14.11 ಕಾರವಾರ:-

ಕಾರವಾರದ ಪ್ರಾಧಿಕಾರದ 1994-95ರ ಆದಾಯ ವೆಚ್ಚ ವಿವರ:-

| | | |
|---|---|---|
| ಆದಾಯ | : | ರೂ. 37.86 ಲಕ್ಷ |
| ವೆಚ್ಚ | : | ರೂ. 37.44 ಲಕ್ಷ |

ಕಾರವಾರ ಪ್ರಾಧಿಕಾರದ ಆದಾಯವು ಬಹುತೇಕವಾಗಿ ನೀರಿನ ತೆರಿಗೆ ಹಾಗೂ ಬೆಟರ್‌ಮೆಂಟ್ ಲೆವಿ ಆಧಾರಗಳ ಮೂಲಕ ಸಂಗ್ರಹಣೆಯಾಗಿರುತ್ತದೆ.

ಬಾಡ ಮೊದಲನೇ ಹಂತದಲ್ಲಿ 37 ಎಕರೆ ಜಮೀನನ್ನು ಸ್ವಾಧೀನ ಪಡಿಸಿಕೊಂಡು 541 ನಿವೇಶನಗಳನ್ನು ನಿರ್ಮಿಸುವ ಕಾರ್ಯಕ್ರಮವಿದೆ. ಎರಡನೇ ಹಂತದ ಬಗ್ಗೆ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. ಪ್ರಾಧಿಕಾರದ ವ್ಯಾಪಕ ಅಭಿವೃದ್ಧಿ ಯೋಜನೆ ಮುಗಿದಿದೆ.

14.12 ಕೊಡಗು-ಮಡಿಕೇರಿ:-

ಮಡಿಕೇರಿ ಪ್ರಾಧಿಕಾರವು ಜುಲೈ 1988ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಕೊಡಗು-ಮಡಿಕೇರಿ ನಗರಾಭಿವೃದ್ಧಿ ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರ:-

ಆದಾಯ : ರೂ. 1.82 ಲಕ್ಷ
ವೆಚ್ಚ : ರೂ. 1.29 ಲಕ್ಷ

ಅಭಿವೃದ್ಧಿ ಕಾರ್ಯಕ್ರಮಗಳ ಪ್ರಗತಿ ಗಮನಾರ್ಹವಾಗಿಲ್ಲ.

14.13 ಕೋಲಾರ:-

ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರವು 1988ರಲ್ಲಿ ಅಸ್ತಿತ್ವಕ್ಕೆ ಬಂದಿದ್ದು, ಸಾರ್ವಜನಿಕರಿಗೆ ಸೌಲಭ್ಯ ಕಲ್ಪಿಸಿಕೊಡುವ ನಾಗರೀಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ಪ್ರಾಧಿಕಾರದ 1994-95ರ ಆಯ-ವ್ಯಯ:-

ಆದಾಯ : ರೂ. 213.93 ಲಕ್ಷ
ವೆಚ್ಚ : ರೂ. 206.12 ಲಕ್ಷ

14.14 ಕೆ.ಜಿ.ಎಫ್:-

ಕೆ.ಜಿ.ಎಫ್.ನಗರಾಭಿವೃದ್ಧಿ ಪ್ರಾಧಿಕಾರದ ಆದಾಯ ಮತ್ತು ವೆಚ್ಚದ ವಿವರ.

ಆದಾಯ : ರೂ. 1.70 ಲಕ್ಷ
ವೆಚ್ಚ : ರೂ. 3.70 ಲಕ್ಷ

ಪ್ರಾಧಿಕಾರವು ದೈನಂದಿನ ಕಾರ್ಯಕ್ರಮಗಳನ್ನು ಜರುಗಿಸಿಕೊಂಡು ಬಂದಿದೆ.

14.15 ಮಂಡ್ಯ:-

ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರವು ತನ್ನದೇ ಆದ ಕಟ್ಟಡವೊಂದರಲ್ಲಿ 1988ರಿಂದ ಕಾರ್ಯಾಚರಣೆಯಲ್ಲಿದೆ. ಮಂಡ್ಯ ನಗರಾಭಿವೃದ್ಧಿ ಪ್ರಾಧಿಕಾರದ ಆದಾಯ ಮತ್ತು ವೆಚ್ಚ ಈ ಕೆಳಗಿನಂತಿದೆ.

ಆದಾಯ : ರೂ. 20.42 ಲಕ್ಷ
ವೆಚ್ಚ : ರೂ. 7.98 ಲಕ್ಷ
ಪ್ರಗತಿ : ಶೇಕಡ 39

ಅಭಿವೃದ್ಧಿ ಕಾರ್ಯಕ್ರಮಗಳು:-

ಅ) ಸಾತನೂರು ಹೊರವಲಯದಲ್ಲಿ ಒಟ್ಟು 216 ನಿವೇಶನಗಳನ್ನು ವಿತರಿಸಿರುತ್ತಾರೆ. ಈ ದಿಸೆಯಲ್ಲಿ ಪ್ರಾಧಿಕಾರವು 31 ಎಕರೆ 07 ಗುಂಟೆ ಜಮೀನನ್ನು ಸ್ವಾಧೀನ ಪಡಿಸಿಕೊಂಡಿರುತ್ತಾರೆ.

ಆ) ಇದಲ್ಲದೆ 31 ಎಕರೆ 8 ಗುಂಟೆ ಜಮೀನನ್ನು ವಶಪಡಿಸಿಕೊಂಡು 353 ನಿವೇಶನಗಳನ್ನು ಹಂಚುವ ಕಾರ್ಯವನ್ನು ತೊಡಗಿಕೊಳ್ಳುವದರಲ್ಲಿ ಯೋಜನೆಯೊಂದನ್ನು ರೂಪಿಸುತ್ತಿದೆ.

ಇ) ಪ್ರಾಧಿಕಾರವು 105 ಪ್ರಾರಂಭಿಕ ಸರ್ಟಿಫಿಕೇಟುಗಳನ್ನು ವಿತರಿಸಿದೆ.

ಈ) 27 ಪ್ರಕರಣಗಳಲ್ಲಿ ತಾಂತ್ರಿಕ ಸಲಹೆಯನ್ನು ಪ್ರಾಧಿಕಾರ ನೀಡಿರುತ್ತದೆ.

## 14.16 ಮಂಗಳೂರು:-

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರದ ಕಾಯಿದೆ 1987ರ ಅನ್ವಯ ಮಂಗಳೂರು ಪ್ರಾಧಿಕಾರವು 1988ರಲ್ಲಿ ಅಸ್ತಿತ್ವಕ್ಕೆ ಬಂದಿತು. ಪ್ರಾಧಿಕಾರದ ಸ್ಥಳೀಯ ಯೋಜನಾ ಕ್ಷೇತ್ರ ವಿಸ್ತೀರ್ಣವು ಒಟ್ಟು 210.5 ಚ.ಕಿ.ಮೀ.

1994-95ರ ಸಾಲಿಗೆ ಪ್ರಾಧಿಕಾರವು 14 ಸಾಮಾನ್ಯ ಸಭೆಯನ್ನು 1 ವಿಶೇಷ ಸಭೆ ಹಾಗೂ 2 ಉಪ ಸಮಿತಿ ಸಭೆಗಳನ್ನು ಜರುಗಿಸಿದೆ. ಡಿಸೆಂಬರ್ 94ರ ಅಂತ್ಯದವರೆಗೆ ಪ್ರಾಧಿಕಾರವು 517 ಪ್ರಾರಂಭಿಕ ಸರ್ಟಿಫಿಕೇಟ್ ಹಾಗೂ 342 ಜೋನಲ್ ಸರ್ಟಿಫಿಕೇಟುಗಳನ್ನು ವಿತರಿಸಿದೆ. ನಾಲ್ಕು ಖಾಸಗಿ ಬಡಾವಣೆಗಳ ರಚನೆಗೆ ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಕಳುಹಿಸಿದ್ದು ಅವುಗಳ ಪೈಕಿ 2 ಪ್ರಕರಣಗಳಲ್ಲಿ ಸರ್ಕಾರದ ಮಂಜೂರಾತಿ ದೊರೆತಿರುತ್ತದೆ.

ಕಾರ್ನಾಡ್ ಸದಾಶಿವರಾಯನಗರ ಬಡಾವಣೆಯಲ್ಲಿ 64 ನಿವೇಶನಗಳನ್ನು ಹಂಚಿದ್ದು, ಇವುಗಳ ಪೈಕಿ 2 ನಿವೇಶನಗಳು ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ ಜನಾಂಗಕ್ಕೆ ವಿತರಿಸಲಾಗಿದೆ.

ಪ್ರಶಾಂತನಗರದಲ್ಲಿ 25 ಮೂಲೆ ನಿವೇಶನಗಳ ವಿಲೇವಾರಿಯಾಗಿದ್ದು ಒಂದು ಸ್ಕೂಲ್ ಸೈಟನ್ನು ಕ್ರೀಡಾ ಮಂಡಳಿಗೆ ಹಂಚಲಾಗಿದೆ.

ಪ್ರಗತಿನಗರ ಬಡಾವಣೆಯಲ್ಲಿ ಶ್ರೀಮತಿ ಜಯಲಕ್ಷ್ಮಿ ಎಂಬುವರಿಗೆ ಮುಫ್ತಿಯಾಗಿ ಒಂದು ನಿವೇಶನವನ್ನು ನೀಡಲಾಗಿದೆ. ಈಕೆ ಕುಖ್ಯಾತ ದಂತಚೋರನನ್ನು ಸೆರೆ ಹಿಡಿಯಲು ಸಾಹಸ ಮಾಡಿ ಮಡಿದ ಎ.ಎಸ್.ಐ. ಕೆ.ಪೊನ್ನಪ್ಪನವರ ಧರ್ಮಪತ್ನಿ.

ಕ್ಲಾಕ್ ಟವರ್ ಜಂಕ್ಷನ ಬಳಿ ಮಂಗಳೂರು ಪ್ರಾಧಿಕಾರ ಟ್ರಾಫಿಕ್ ಸಿಗ್ನಲ್ ಲೈಟನ್ನು ಅಳವಡಿಸಿದೆ.

ಪ್ರಾಧಿಕಾರದ 1994-95ರ ಆದಾಯ ವೆಚ್ಚದ ವಿವರ:-

ಆದಾಯ : ರೂ. 1456.05 ಲಕ್ಷ
ವೆಚ್ಚ : ರೂ. 1341.09 ಲಕ್ಷ
ಪ್ರಗತಿ : ಶೇಕಡ 92

## 14.17 ಮೈಸೂರು:-

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಆದಾಯ ಮತ್ತು ವೆಚ್ಚದ ವಿವರ:-

ಅ) ಆದಾಯ : ರೂ. 4810.20 ಲಕ್ಷ
ವೆಚ್ಚ : ರೂ. 4800.00 ಲಕ್ಷ
ಆ) ಬೇಡಿಕೆ : ರೂ. 16.85 ಲಕ್ಷ
ವಸೂಲಿ : ರೂ. 12.03 ಲಕ್ಷ
ಪ್ರಗತಿ : ಶೇಕಡ 70.97

ಅಭಿವೃದ್ಧಿ ಕಾರ್ಯಕ್ರಮ:-

(ಅ) 17 ಮೂರಿ ಮನೆಗಳನ್ನು ಹರಾಜಿನ ಮೂಲಕ ಮಾರಾಟ ಮಾಡಿದೆ.

(ಆ) ಶೇಕಡ 50ರ ರಿಯಾಯಿತಿ ದರದ ಮೇರೆಗೆ ಪ್ರಾಧಿಕಾರವು 554 ನಿವೇಶನಗಳನ್ನು ವಿತರಿಸಿದೆ. ಅವುಗಳ ವಿವರ ಈ ರೀತಿ ಇದೆ:-

50' X 80' : 4 ನಿವೇಶನ
40' X 60' :163 ನಿವೇಶನ
30' X 40' :266 ನಿವೇಶನ
20' X 30' :121 ನಿವೇಶನ

(ಇ) ಓನ್ ಯುವರ್ ಸ್ಕೀಂ ಅಡಿಯಲ್ಲಿ 15 ಹೆಚ್.ಐ.ಜಿ. 46 ಎಂ.ಐ.ಜಿ.ಮನೆಗಳ ವಿತರಣೆಯನ್ನು ಮಾಡಿದೆ.

(ಈ) ಸ್ವಂತ ಹಣದ ವ್ಯವಸ್ಥೆಯಡಿಯಲ್ಲಿ ಮನೆಗಳನ್ನು ಖರೀದಿಸುವ ಸಾಮರ್ಥ್ಯವುಳ್ಳ ಸಾರ್ವಜನಿಕರಿಂದ ಪ್ರಾಧಿಕಾರವು ಅರ್ಜಿಗಳನ್ನು ಕರೆದಿದೆ. 1772 ಲಭ್ಯವಿರುವ ಮನೆಗಳನ್ನು ವಿತರಿಸುವ ಉದ್ದೇಶದಿಂದ ಕಾರ್ಯಕ್ರಮವು ಹಮ್ಮಿಕೊಂಡಿದ್ದು, ಇದಕ್ಕೆ ಉತ್ತರವಾಗಿ 373 ಅರ್ಜಿಗಳನ್ನು ಪ್ರಾಧಿಕಾರ ಸ್ವೀಕರಿಸಿದೆ.

14.18 ರಾಯಚೂರು:-

ರಾಯಚೂರು ನಗರಾಭಿವೃದ್ಧಿಪ್ರಾಧಿಕಾರದ ಆದಾಯ ಮತ್ತು ವೆಚ್ಚ ಈ ಕೆಳಗಿನಂತಿದೆ:-

(1) ಆದಾಯ : ರೂ. 10.71 ಲಕ್ಷ
ವೆಚ್ಚ(ಖರ್ಚು) : ರೂ. 10.63 ಲಕ್ಷ

(2) ಶೇಕಡ 18ರ ಮೀಸಲಾತಿಯಲ್ಲಿ ಕಾರ್ಯಕ್ರಮಗಳು ಯಾವೂ ಇರುವುದಿಲ್ಲ.

ಯೋಜನೆಯಡಿಯಲ್ಲಿ ಕಾರ್ಯಕ್ರಮಗಳು:-

(1) ಪ್ರಾಧಿಕಾರವು ಮನೆ ನಿವೇಶನಕ್ಕಾಗಿ 48 ಎಕರೆ 05 ಗುಂಟೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವ ಯತ್ನದಲ್ಲಿದೆ.

(2) ಹೊಸ ಯೋಜನೆಗಾಗಿ ಪ್ರಾಧಿಕಾರವು [illegible] ಸರ್ವೆ ನಂಬರ್ 265:1ರಲ್ಲಿ 3 ಎಕರೆ ಜಮೀನನ್ನು ವಶಪಡಿಸಿಕೊಳ್ಳುವ ಸಲುವಾಗಿ ನೋಟಿಫಿಕೇಷನ್ ಹೊರಡಿಸಿದೆ.

(3) ರಾಯಚೂರು ಸುತ್ತಲೂ 21.3 ಕಿ.ಮೀ.ಉದ್ದದ ವೃತ್ತ ರಸ್ತೆಯನ್ನು ಪ್ರಾರಂಭದ ಕಾರ್ಯಕ್ರಮವನ್ನು ಪ್ರಾಧಿಕಾರ ಯೋಜಿಸಿದೆ.

(4) 218[illegible] [illegible] ಪ್ರಾಧಿಕಾರವು ನಾಲ್ಕು ಪ್ರಕರಣಗಳಿಗೆ ಭೂ ಪರಿವರ್ತನೆಯ ಮಂಜೂರಾತಿ ನೀಡಿದೆ. 55ರ ಪ್ರಾರಂಭ ಸರ್ಟಿಫಿಕೇಟ್ ನೀಡಿದ್ದು 2 ಬಡಾವಣೆಗಳಿಗೆ ಅನುಮೋದನೆಯನ್ನು ನೀಡಿದೆ. 23 [illegible] ಪ್ರಕರಣಗಳನ್ನು ಒಪ್ಪಿದ್ದು 10 ಪ್ರಕರಣಗಳಲ್ಲಿ ಪ್ರಾಧಿಕಾರವು ತನ್ನ ನಿರಾಕರಣೆಯನ್ನು ತಿಳಿಯಪಡಿಸಿದೆ.

14.19 ಶಿವಮೊಗ್ಗ:-

ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರದ 1994-95 ಆದಾಯ ಮತ್ತು ವೆಚ್ಚದ ವಿವರ:-

| | | | | |
|---|---|---|---|---|
| (1) | ಆದಾಯ | : | ರೂ. | 263.66 ಲಕ್ಷ |
| | ವೆಚ್ಚ | : | ರೂ. | 307.73 ಲಕ್ಷ |
| (2) | ಬೇಡಿಕೆ | : | ರೂ. | 177.80 ಲಕ್ಷ |
| | ವಸೂಲಿ | : | ರೂ. | 85.45 ಲಕ್ಷ |
| | ಬಾಕಿ | : | ರೂ. | 92.35 ಲಕ್ಷ |

ಶೇಕಡ ವಸೂಲಿ: 48

ಅಭಿವೃದ್ಧಿ ಕಾರ್ಯಕ್ರಮ:-

ಪ್ರಾಧಿಕಾರವು ನಿವೇಶನ ಹಂಚುವಿಕೆ, ರಸ್ತೆ, ಕುಡಿಯುವ ನೀರು ಹಾಗೂ ಮನೆಗಳ ನಿರ್ಮಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

14.20 ತುಮಕೂರು:-

ತುಮಕೂರಿನ ಸರ್ವತೋಮುಖ ಅಭಿವೃದ್ಧಿಯನ್ನು ಗಮನಕ್ಕೆ ತೆಗೆದುಕೊಂಡು ಪ್ರಾಧಿಕಾರವು(ವ್ಯಾಪಕ) ಅಭಿವೃದ್ಧಿ ಯೋಜನೆಯನ್ನು ತಯಾರಿಸಿದೆ. ಅಲ್ಲದೆ, ಔಟ್‌ಲೈನ ಡೆವಲಪ್‌ಮೆಂಟ್ ಯೋಜನೆಯನ್ನು ತಯಾರಿಸಿದ್ದು ಕಾರ್ಯಕ್ರಮವು ಕೊನೆಯ ಹಂತದಲ್ಲಿದೆ.

ಕಸಬ ಹೋಬಳಿ ಶೆಟ್ಟಿಹಳ್ಳಿ ಗ್ರಾಮದ ಬಳಿ ಪ್ರಾಧಿಕಾರವು 50 ಎಕರೆ 14 ಗುಂಟೆ ಕ್ಷೇತ್ರದ ಜಮೀನನ್ನು ಸ್ವಾಧೀನಪಡಿಸಿಕೊಂಡು 241 ನಿವೇಶನಗಳನ್ನು ತಯಾರಿಸುವ ಯೋಜನೆಯೊಂದನ್ನು ಹಾಕಿಕೊಂಡಿದ್ದು, ಡಿಸೆಂಬರ್ 1994ರ ಅಂತ್ಯದವೇಳೆಗೆ 198 ನಿವೇಶನಗಳನ್ನು ಹಂಚಿದೆ.

ಇದರ ಜೊತೆಗೆ ಮೆಳೆಕೋಟೆ-ದೇವರಸಾಗರದ ಬಳಿ 170 ಎಕರೆ 39 ಗುಂಟೆ ಜಮೀನನ್ನು ಖರೀದಿಸಿ 2030 ನಿವೇಶನಗಳನ್ನು ವಿಂಗಡಿಸುವ ಕಾರ್ಯವನ್ನು ಸಹ ಪ್ರಾಧಿಕಾರ ಯೋಜಿಸುತ್ತಿದೆ. ಇದಕ್ಕೆ ತಗಲುವ ಅಂದಾಜು ವೆಚ್ಚ ರೂ.6.87 ಕೋಟಿ.

9 ಮಾದರಿ ನಿವೇಶನಗಳನ್ನು ವಿತರಿಸುವ ಸಲುವಾಗಿ ಪ್ರಾಧಿಕಾರ ಕ್ರಮವನ್ನು ಅನುಸರಿಸಿದೆ.

ಅಭಿವೃದ್ಧಿ ಕಾರ್ಯಕ್ರಮ:-

(1) ತುಮಕೂರು-ಬೆಂಗಳೂರು ಮಾರ್ಗದಲ್ಲಿ ಸೋಮೇಶ್ವರ ಬಡಾವಣೆಯಲ್ಲಿ 67ನೇ ಕಿ.ಮೀ.ದೂರದಲ್ಲಿ 40 ಅಡಿ ರಸ್ತೆಯ ನಿರ್ಮಾಣವನ್ನು ಮಾಡಿ ಡಾಂಬರೀಕರಣ ಕಾರ್ಯವನ್ನು ನಡೆಸಿದೆ.

(2) ರೂ.3.60 ಲಕ್ಷ ವೆಚ್ಚದಲ್ಲಿ ಕುಣಿಗಲ್ ಕಡೆಯ ಜನತಾ ಕಾಲೋನಿಯ ಬಳಿ 40 ಅಡಿ ರಸ್ತೆ ಕಾರ್ಯವನ್ನು ಮುಗಿಸಿದೆ.

(3) ಸಿದ್ಧಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯ 22, 23 ಮತ್ತು 24ನೇ ಕ್ರಾಸ್ ಬಳಿ ಒಳಚರಂಡಿ ಕಾರ್ಯವನ್ನು ರೂ.1.50 ಲಕ್ಷ ಅಂದಾಜು ವೆಚ್ಚದಲ್ಲಿ ಪೂರ್ಣಗೊಳಿಸಿದೆ.

(4) ಅಲಕೆಟ್ಟಿಕೆರೆ ಪಾಳ್ಯದ ಬಳಿ ಒಳಚರಂಡಿಯನ್ನು ಸುವ್ಯವಸ್ಥಿತ ಗೊಳಿಸುವ ಸಲುವಾಗಿ ಪೂರ್ವಭಾವಿ ಕಾರ್ಯಕ್ರಮವನ್ನು ಹಾಕಿಕೊಂಡಿದ್ದು, ಕಲ್ವರ್ಟ್ ರಚನೆಗಳನ್ನು ಪ್ರಾರಂಭಿಸಿದ್ದು ಕೆಲಸ ಪ್ರಗತಿಯಲ್ಲಿದೆ.

(5) ಪ್ರಾಧಿಕಾರದ 1994-95ರ ಆದಾಯ ಮತ್ತು ವೆಚ್ಚದ ವಿವರ:-

| | | |
|---|---|---|
| ಆದಾಯ | : | ರೂ. 936.85 ಲಕ್ಷ |
| ವೆಚ್ಚ | : | ರೂ. 891.54 ಲಕ್ಷ |

(6) ಪ್ರಾಧಿಕಾರದ ಬೇಡಿಕೆ, ವಸೂಲಾತಿ ಮತ್ತು ಬಾಕಿ ವಿವರ:-

| | | |
|---|---|---|
| ಬೇಡಿಕೆ | : | ರೂ. 35.65 ಲಕ್ಷ |
| ವಸೂಲಿ | : | ರೂ. 15.22 ಲಕ್ಷ |
| ಬಾಕಿ | : | ರೂ. 20.43 ಲಕ್ಷ |

15. <u>ಅಭಿವೃದ್ಧಿ ಮಂಡಳಿ ಹಾಗೂ ಅಭಿವೃದ್ಧಿ ಪ್ರಾಧಿಕಾರ</u>

ರಾಜ್ಯದಲ್ಲಿ ಎರಡು ಅಭಿವೃದ್ಧಿ ಮಂಡಳಿಗಳು ಅಸ್ತಿತ್ವದಲ್ಲಿವೆ.

(1) ಹೊಸಪೇಟೆ
(2) ಬಾಗಲಕೋಟೆ

15.1 <u>ಅಭಿವೃದ್ಧಿ ಮಂಡಳಿ ಹೊಸಪೇಟೆ:-</u>

(ಅ) 1994-95ರಲ್ಲಿ ಸಂಕ್ಲಾಪುರ ಗ್ರಾಮದ ಮಂಡಳಿಯು ಸರ್ವೆ ನಂ.88ರಲ್ಲಿ 2-36 ಸೆಂಟ್ ಜಮೀನನ್ನು ವಶಪಡಿಸಿಕೊಂಡು 43 ನಿವೇಶನಗಳನ್ನು ರಚಿಸುವ ಕಾರ್ಯಕ್ರಮ ಹಾಕಿಕೊಂಡಿತ್ತು. ಇದರನ್ವಯ 24 ನಿವೇಶನಗಳ ವಿತರಣೆಯಾಗಿದೆ. ಇದಲ್ಲದೆ ಸಂಕ್ಲಾಪುರ ಗ್ರಾಮದಲ್ಲಿ 54.54 ಎಕರೆ ಜಮೀನನ್ನು ಖರೀದಿಸಿ 'ವಿನಾಯಕ ನಗರ' ಬಡಾವಣೆಯನ್ನು ರಚಿಸಿದೆ.

(ಆ) ಮಂಡಳಿಯ 1994-95ರ ಆದಾಯ ಮತ್ತು ವೆಚ್ಚದ ವಿವರ:-

| | | |
|---|---|---|
| ಆದಾಯ | : | ರೂ. 963.88 ಲಕ್ಷ |
| ವೆಚ್ಚ | : | ರೂ. 843.20 ಲಕ್ಷ |

ಮಂಡಳಿಯ 1994-95ರ(ಡಿಸೆಂಬರ್ 94)ರ ಅಂತ್ಯದವರೆಗೆ ಬೇಡಿಕೆ, ವಸೂಲಿ ಮತ್ತು ಬಾಕಿ ವಿವರಗಳು ಈ ರೀತಿ ಇವೆ:-

| ವರ್ಷ | ಬೇಡಿಕೆ | ವಸೂಲಿ | ಬಾಕಿ |
|---|---|---|---|
| 1994-95 | 160.37 | 37.25 | 123.12 |

ಮಾಲೀಕರಿಗೆ ನೀಡಿ, ಸ್ವಾಧೀನ ಪಡೆಯಲಾಗುತ್ತಿದೆ. ಈ ಪರಿಹಾರ ಧನಕ್ಕೆ ಸಂಬಂಧಿಸಿದಂತೆ ಮೂಲ ಪರಿಹಾರ ಧನ ಸುಮಾರು ಅರ್ಧ ದಷ್ಟು ಹೆಚ್ಚುವರಿ ಪರಿಹಾರ ಧನ ನೀಡುವಂತೆ ನ್ಯಾಯಾಲಯದಿಂದ ತೀರ್ಪುಗಳು ಬಂದಿದ್ದರಿಂದ ಸುಮಾರು 21.42 ಕೋಟಿ ರೂಪಾಯಿಗಳು ಈಗಾಗಲೇ ವಿತರಿಸಲಾಗಿದೆ.

(2) ಕಟ್ಟಡಗಳ ಮೌಲ್ಯೀಕರಣ:- ಕೃಷ್ಣಾ ಮೇಲ್ದಂಡೆ ಯೋಜನೆ ಆಲಮಟ್ಟಿ ಜಲಾಶಯದ ಹಿನ್ನೀರಿನಿಂದ ಬಾಧಿತವಾಗುವ (ಪ್ರಥಮ ಘಟ್ಟ 2ನೇ ಹಂತದಲ್ಲಿ) ಬಾಗಲಕೋಟೆ ನಗರದ 618 ಕುಟುಂಬಗಳ ಕಟ್ಟಡಗಳ ಪೈಕಿ 440 ಕಟ್ಟಡಗಳ ಭೂ ಸ್ವಾಧೀನ ಕಾಯಿದೆ ಪ್ರಕಾರ 4(1) ಮತ್ತು 6(1) ಅಧಿಸೂಚನೆಯನ್ನು ಈಗಾಗಲೇ ಹೊರಡಿಸಲಾಗಿದ್ದು ಮತ್ತು ಕಟ್ಟಡಗಳ ಮೌಲ್ಯ ಮಾಪನಾ ಕಾರ್ಯವು ಮುಗಿದಿದ್ದು ಸದರಿ ಕಟ್ಟಡಗಳ ಮೌಲ್ಯ ಮಾಪನಾ ಅಂದಾಜು ಪತ್ರಿಕೆಯನ್ನು ತಯಾರಿಸಿ ಈಗಾಗಲೇ ವಿಶೇಷ ಭೂ ಸ್ವಾಧೀನಾಧಿಕಾರಿಗಳಿಗೆ ಮುಂದಿನ ಕ್ರಮಕ್ಕಾಗಿ ರವಾನಿಸಲಾಗಿದೆ.

(3) ನೀರು ಸರಬರಾಜು:- ಸರ್ಕಾರ ಹಿಂದಿನಲ್ಲಿ ಆದೇಶ ಮುಂಬಯಿ ಗುಡ್ಡದ ಮೇಲೆ 2.27 ದಶಲಕ್ಷದಷ್ಟು ಸಾಮರ್ಥ್ಯದ ಜಿ.ಎಲ್.ಎಸ್.ಆರ್.ಕೆಲಸವು ಪೂರ್ಣಗೊಂಡಿದ್ದು ಮುಂದೆ ನವನಗರದಲ್ಲಿ ಬೇಡಿಕೆಯ ಬಾರಿಗೆ ಅಭಿವೃದ್ಧಿ ಪಡಿಸುವ ಸೆಕ್ಟರುಗಳಿಗೆ ನೀರನ್ನು ಪೂರೈಸಲಾಗುವುದು ಮತ್ತು ಈ ಸೆಕ್ಟರುಗಳಿಗೆ ನೀರು ಪೂರೈಸಲು ಸುಮಾರು ರೂ.174.00 ಲಕ್ಷಗಳ ಮೊತ್ತದ ಅಂದಾಜು ಪತ್ರಿಕೆಯನ್ನು ತಯಾರಿಸಿ ಸದರಿ ಕೆಲಸಗಳನ್ನು ಪ್ರಾಧಿಕಾರದ ವತಿಯಿಂದ ಕೈಗೊಳ್ಳಲು ತೀರ್ಮಾನಿಸಲಾಗಿದ್ದು ಈ ಕೆಲಸವನ್ನು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದ ಎಲ್.ಸಿ.ಬಿ.ದ್ವಾರದ ಮೇಲೆ ಕೈಗೆತ್ತಿಕೊಳ್ಳಲಾಗಿದೆ ಮತ್ತು ನವನಗರದಲ್ಲಿ ಒಳಚರಂಡಿ ಯೋಜನಾ ಕಾರ್ಯದ ಅಂದಾಜು ಪತ್ರಿಕೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಶೀಘ್ರವಾಗಿ ತಯಾರಿಸಲು ಈಗಾಗಲೇ ಅವರಿಗೆ ತಿಳಿಸಲಾಗಿದೆ ಅಲ್ಲದೆ ಪ್ರಾಧಿಕಾರವು ರೂ.7.22 ಕೋಟಿ ವೆಚ್ಚದಲ್ಲಿ 49 ಸೆಕ್ಟರುಗಳಿಗೂ ಅನ್ವಯಿಸುವಂತೆ ಒಳಚರಂಡಿ ಯೋಜನೆಯನ್ನು ತಯಾರಿಸಿದೆ.

(4) ಜಲಪವನ ಪರಿವೀಕ್ಷಣಾ ಕೇಂದ್ರ:- ಜಲ ಪವನ ಕೇಂದ್ರವನ್ನು ಗಾಳಿಯ ವೇಗ, ಮಳೆ ಸುರಿತ, ಮತ್ತು ಆರ್ದ್ರತೆಯ ಮಾಹಿತಿಯನ್ನು ಸಂಗ್ರಹಿಸಲು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದ ವಸಾಹತುವಿನಲ್ಲಿ ಸ್ಥಾಪಿಸಲಾಗಿದೆ. ಈ ವಿಷಯವಾಗಿ ಪ್ರತಿ ದಿವಸ ಮಾಹಿತಿಯನ್ನು ಸಂಗ್ರಹ ಮಾಡಲಾಗುತ್ತಿದೆ.

(5) ವಿದ್ಯುಚ್ಛಕ್ತಿ ಪೂರೈಕೆ:- ಈ ವಿಷಯದಲ್ಲಿ ಎಲ್.ಸಿ.ಬಿ. ದ್ವಾರದ ಮೇಲೆ ಟೆಂಡರುಗಳು ಕರೆಯಲಾಗಿದ್ದು 3 ಅರ್ಹ ಗುತ್ತಿಗೆಗಳನ್ನು ವಿಸ್ತಾರವಾಗಿ ಪರಿಶೀಲಿಸಿ ಕಡಿಮೆ ದರದ ಗುತ್ತಿಗೆಯನ್ನು ಸರ್ಕಾರದ ಅನುಮತಿಗೋಸ್ಕರ ಈಗಾಗಲೇ ಸಲ್ಲಿಸಲಾಗಿದೆ. ಸರ್ಕಾರದ ಅನುಮತಿ ಪಡೆದ ನಂತರ ಈ ಕಾಮಗಾರಿ ಕೆಲಸವನ್ನು ಮಾರ್ಚ್ 1994ರಿಂದ ಕೈಗೊಳ್ಳಲಾಗುವುದು. ಸದರಿ ಕೆಲಸವು ಸುಮಾರು ರೂ.87.00 ಲಕ್ಷಗಳಿಗೆ ಅಂದಾಜು ಪತ್ರಿಕೆಯನ್ನು ತಯಾರಿಸಲಾಗಿದ್ದು ಟೆಂಡರು ಮೌಲ್ಯ ರೂ.120.96 ಲಕ್ಷಗಳಿಗೆ ಅಂಗೀಕರಿಸಲು ಸರ್ಕಾರಕ್ಕೆ ಸಲ್ಲಿಸಲಾಗಿದೆ.

(6) ರಸ್ತೆಗಳು:—

ಎಲ್.ಐ.ಬಿ.ಆಧಾರದ ಮೇಲೆ ಟೆಂಡರುಗಳನ್ನು ತಯಾರಿಸಲಾಗಿದ್ದು ಇದರ ಮೇಲೆ ಅರ್ಹ ಗುತ್ತಿಗೆಗಳನ್ನು ವಿವರವಾಗಿ ಪರಿಶೀಲಿಸಿ ಕಡಿಮೆ ದರದ ಗುತ್ತಿಗೆಯನ್ನು ಸರ್ಕಾರದ ಅನುಮತಿಗೋಸ್ಕರ ಸಲ್ಲಿಸಲಾಗಿದೆ. ಸದರಿ ಕೆಲಸವು ಸುಮಾರು ರೂ.435.00 ಲಕ್ಷಗಳಿಗೆ ಅಂದಾಜು ಮಾಡಲಾಗಿದೆ.

ಮುಚಖಂಡಿ-ಬಾಗಲಕೋಟೆ ರಸ್ತೆಯ ಸುಧಾರಣೆ ಕೆಲಸದ ಅಂದಾಜು ಪತ್ರಿಕೆಯನ್ನು ಈಗಾಗಲೇ ತಯಾರಿಸಲಾಗಿದೆ.

(7) ನಗರ ವನಗಳು ಹಾಗೂ ನಗರ ಸೌಂದರ್ಯೀಕರಣ:—

ಬಾಗಲಕೋಟೆ ನವನಗರದಲ್ಲಿ ಬರುವ ರಸ್ತೆಗಳ ಮಗ್ಗುಲಿಗೆ ಗಿಡಗಳನ್ನು ನೆಡುವ ಕೆಲಸವು ಪ್ರಾರಂಭವಾಗಿರುತ್ತದೆ ಮತ್ತು ಈಗಾಗಲೇ 3000 ಗಿಡಗಳನ್ನು ನೆಡಲಾಗಿದೆ. ಲ್ಯಾಂಡ್ ಸ್ಕೇಪ್ ವಿನ್ಯಾಸದ ಪ್ರಕಾರ ಗಿಡಗಳನ್ನು ನೆಡುವ ಕಾರ್ಯಕ್ರಮ ಮುಂದುವರಿಯುವುದು.

(8) ನವನಗರದ ಬಡಾವಣೆ:—

ನವನಗರದ 49 ಸೆಕ್ಟರ್‌ಗಳಿಂದ ಕೂಡಿರುವ ಮಾಸ್ಟರ್ ಪ್ಲಾನ್ ಪ್ರಕಾರ ಬರುವ ವಿವಿಧ ನಿವೇಶನಗಳ ಅಳತೆಗಳನ್ನು ಗುರುತಿಸುವ ಕಾರ್ಯವು ಮುಗಿದಿರುತ್ತದೆ.

—

| ವರ್ಷ | ಆದಾಯ | ವೆಚ್ಚ |
|---|---|---|
| 1994-95 (ಡಿಸೆಂಬರ 94) | 10.31 | 10.35 |

ಗದಗ-ಬೆಟಗೇರಿ ನಗರ ಯೋಜನಾ ಪ್ರಾಧಿಕಾರವು 1994-95ನೇ ಸಾಲಿನಲ್ಲಿ 13 ಪ್ರಕರಣಗಳಿಗೆ ಅಭಿಪ್ರಾಯ ಕಳುಹಿಸಿದೆ. ಈ ಪ್ರಾಧಿಕಾರವು ಆಶ್ರಯ ಯೋಜನೆಗೆ 14.92 ಹೆಕ್ಟೇರ ಭೂಮಿಯನ್ನು ವಶಪಡಿಸಿ ಕೊಂಡು ಲೇ ಔಟ ರಚನೆಯನ್ನು ಮಾಡಿದೆ. ಕಳೆದ ಸಾಲಿನಲ್ಲಿ ಪ್ರಾಧಿಕಾರವು 196 ಪ್ರಾರಂಭಿಕ ಸರ್ಟಿಫಿಕೇಟನ್ನು ನೀಡಿದೆ.

16.3 ಉಡುಪಿ-ಮಣಿಪಾಲ:-

ಉಡುಪಿ-ಮಣಿಪಾಲ ಯೋಜನಾ ಪ್ರಾಧಿಕಾರವು ಯೋಜನಾ ಕಾಯಿದೆ 4ಸಿ 1965ರನ್ವಯ ಕೆಲಸ ನಿರ್ವಹಿಸುತ್ತಿದ್ದು ಜಿಲ್ಲಾಧಿಕಾರಿಗಳು ಪ್ರಾಧಿಕಾರದ ಅಧ್ಯಕ್ಷರಾಗಿಯೂ, ನಗರ ಯೋಜನಾ ಸಹಾಯಕ ನಿರ್ದೇಶಕರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ. ಚೀಫ ಆಫೀಸರ ಟಿ.ಎಂ.ಸಿ.-ಉಡುಪಿ-ಪ್ರಾಧಿಕಾರದ ಸದಸ್ಯರಾಗಿರುತ್ತಾರೆ.

1994-95ನೇ ಸಾಲಿನಲ್ಲಿ ಪ್ರಾಧಿಕಾರವು 107 ಸಭೆಗಳನ್ನು ಜರುಗಿಸಿದ್ದು ಒಟ್ಟು 253 ನಕ್ಷೆಗಳನ್ನು ಪಾಸು ಮಾಡಲಾಗಿದೆ.

165 ಪ್ರಕರಣಗಳಲ್ಲಿ ತಾಂತ್ರಿಕ ಸಲಹೆಯನ್ನು ನೀಡಿದೆ, 913 ಪ್ರಾರಂಭಿಕ ಸರ್ಟಿಫಿಕೇಟನ್ನು ನೀಡಿದೆ.

1994-95ನೇ ಸಾಲಿನ ಪ್ರಾಧಿಕಾರದ ಆದಾಯ ಮತ್ತು ವೆಚ್ಚ ಈ ಕೆಳಗಿನಂತಿದೆ:-

| | |
|---|---|
| ಆದಾಯ | : ರೂ. 68.92 ಲಕ್ಷ |
| ವೆಚ್ಚ | : ರೂ. 1.33 ಲಕ್ಷ |
| ಬಾಕಿ | : ರೂ. 67.59 ಲಕ್ಷ |

16.4 ವಾಡಿ-ಶಹಾಬಾದ:-

ವಾಡಿ-ಶಹಾಬಾದ ಯೋಜನಾ ಪ್ರಾಧಿಕಾರವನ್ನು ಸರ್ಕಾರದ ಅಧಿಸೂಚನೆಯ ಮೇರೆಗೆ 1982ರಲ್ಲಿ ರಚಿಸಲಾಗಿದೆ. ಸದರಿ ಪ್ರಾಧಿಕಾರವು ಕ್ರಿಯಾಶೀಲವಾಗಿ ಮುಂದುವರೆಯುತ್ತಿದೆ. ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಈ ಪ್ರಾಧಿಕಾರದ ಅಧ್ಯಕ್ಷರಾಗಿಯೂ, ಸಹಾಯಕ ನಿರ್ದೇಶಕರು, ನಗರ ಯೋಜನಾ ಗುಲ್ಬರ್ಗಾ ಇವರು ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ. ಚೀಫ ಆಫೀಸರ ಆಫ ಶಹಾಬಾದ ಮತ್ತು ನೋಟಿಫೈಡ ಏರಿಯಾ ಕಮಿಟಿ- ಎ.ಸಿ.ಸಿ.-ವಾಡಿ ಇವರುಗಳೂ ಸಹ ಸದಸ್ಯರಾಗಿರುವರು.

ಇದಲ್ಲದೆ ಪ್ರಾಧಿಕಾರವು ತನ್ನ ವ್ಯಾಪ್ತಿಯಲ್ಲಿ ಬರುವ ಪ್ರದೇಶಕ್ಕೆ ರೂಪ ರೇಷೆ ತಯಾರಿಸಿ ಅನುಮೋದನೆ ನೀಡಿರುತ್ತದೆ. ಹಾಗೂ ತನ್ನ ವ್ಯಾಪ್ತಿಯಲ್ಲಿ ಬರುವ 7 ಮೂಲ ನಕ್ಷೆಯನ್ನು ತಯಾರಿಸಲಾಗಿದೆ. ಸ್ಥಳೀಯ ಸಂಸ್ಥೆಗಳಿಗೆ ಮತ್ತು ಕಂದಾಯ ಇಲಾಖೆಗೆ ತಾಂತ್ರಿಕ ಅಭಿಪ್ರಾಯವನ್ನು ನೀಡುತ್ತದೆ. ಈವರೆವಿಗೂ ಪ್ರಾಧಿಕಾರವು 44 ಸಭೆ ನಡೆಸಿ, 42 ವಿಷಯಗಳನ್ನು ಚರ್ಚಿಸಿ 4 ರೂಪ ರೇಷೆಗಳನ್ನು ಮಂಜೂರು ಮಾಡಲಾಗಿದೆ.

ಪ್ರಾಧಿಕಾರದ ಆದಾಯ ಮತ್ತು ವೆಚ್ಚ ಈ ಕೆಳಕಂಡಂತಿದೆ:—

| | | |
|---|---|---|
| ಆದಾಯ | : | ರೂ. 39,242 |
| ವೆಚ್ಚ | : | ರೂ. 58,261 |

ಬೆಟರಮೆಂಟ ಶುಲ್ಕ, ಲೆವಿ, ಪರವಾನಗಿ ಫೀ, ನಕ್ಷೆ ಮಾರಾಟ ಫೀ ಇವು ಆದಾಯದ ಮೂಲವಾಗಿರುತ್ತದೆ. ಪ್ರಾಧಿಕಾರದ ವೆಚ್ಚದಲ್ಲಿ ಕಛೇರಿ ಬಾಡಿಗೆ, ಕಛೇರಿಯ ಇತರ ವೆಚ್ಚಗಳು ಸೇರಿರುತ್ತವೆ. ಪ್ರಸ್ತುತ ಸಾಲಿಗೆ ಪ್ರಾಧಿಕಾರವು 1ಎ 11 ಗುಂಟೆ ಜಮೀನಿನಲ್ಲಿ 2 ರೇ ಷಾಗಳ ರಚನೆಯನ್ನು ಮಾಡಿದೆ ಅಲ್ಲದೆ 44 ಪ್ರಾರಂಭಿಕ ಪತ್ರಗಳನ್ನು ನೀಡಿದೆ.

17. <u>ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ</u>

ಕರ್ನಾಟಕ ಕೊಳಚೆ ಪ್ರದೇಶದ(ಸುಧಾರಣೆ ಮತ್ತು ನಿರ್ಮೂಲನಾ) ಕಾಯ್ದೆ 1974ರ ಅನ್ವಯ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯು 1975ರಲ್ಲಿ ಅಸ್ತಿತ್ವಕ್ಕೆ ಬಂದಿತು. ಮಂಡಳಿಯ ಮುಖ್ಯ ಧ್ಯೇಯವೆಂದರೆ:—

ಅ) ಕೊಳಚೆ ಪ್ರದೇಶಗಳನ್ನು ಗುರುತಿಸುವುದು.

ಆ) ಕೊಳಚೆ ನಿವಾಸಿಗಳಿಗೆ ಕಡಿಮೆ ವೆಚ್ಚದ ಗೃಹ ನಿರ್ಮಾಣದ ಮೂಲಕ ಪುನರ್ವಸತಿ ಕಲ್ಪಿಸುವುದು.

ಇ) ನಗರಗಳಲ್ಲಿನ ಪರಿಸರ ಸಂರಕ್ಷಣೆ ಹಾಗೂ ಸುಧಾರಣೆ.

ಈ) ನಿವೇಶನ ಮತ್ತು ಸೇವೆ.

ಉ) ಸಮುದಾಯ ಭವನಗಳ ನಿರ್ಮಾಣ ಮತ್ತು ಮೂಲಭೂತ ಸೇವಾ ಸೌಕರ್ಯ.

ಈವರೆವಿಗೆ ಮಂಡಳಿಯು ರಾಜ್ಯದಲ್ಲಿ 1615 ಕೊಳಚೆ ಪ್ರದೇಶಗಳನ್ನು ಗುರುತಿಸಿದೆ. ಕರ್ನಾಟಕ ಕೊಳಚೆ ಪ್ರದೇಶಗಳ(ಸುಧಾರಣೆ ಮತ್ತು ನಿರ್ಮೂಲನಾ) ಕಾಯ್ದೆಯಡಿಯಲ್ಲಿ ಮಂಡಳಿಯು ಪ್ರಮುಖವಾಗಿ ಕೊಳಚೆ ಪ್ರದೇಶ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ಬೀದಿ ದೀಪ, ರಸ್ತೆ, ಚರಂಡಿ ಹಾಗೂ ಶೌಚಾಲಯ ಇವುಗಳನ್ನು ಒದಗಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

17.3 ಯೋಜನಾ ಕಾರ್ಯಕ್ರಮಗಳು:-

ಪ್ರಸ್ತುತ ಸಾಲಿನಲ್ಲಿ ಮಂಡಳಿಗೆ ಯೋಜನೆಯಡಿಯಲ್ಲಿ ರೂ:859 ಲಕ್ಷವನ್ನು ಆಯವ್ಯಯದಲ್ಲಿ ಅಳವಡಿಸಿರುತ್ತದೆ. ಇದರ ಪೈಕಿ ರೂ: 330.00 ಲಕ್ಷಗಳನ್ನು ಕೊಳಚೆ ಸುಧಾರಣಾ ಕಾರ್ಯಕ್ರಮಕ್ಕೆಂದು ರೂ:400.00 ಲಕ್ಷವನ್ನು ವಸತಿ ಸೌಲಭ್ಯಕ್ಕಾಗಿ ರೂ:45.00 ಲಕ್ಷ ಹಣವನ್ನು ನಿವೇಶನ ಮತ್ತು ಸೇವೆಗಳಿಗೆಂದು ಕಾದಿರಿಸಿದ್ದು ರೂ:80.00 ಲಕ್ಷವನ್ನು ಆಡಳಿತ ಸಿಬ್ಬಂದಿ ಖರ್ಚಿಗೆ ಕಾದಿರಿಸಿದೆ. ರೂ: 4.00 ಲಕ್ಷ ಹಣವನ್ನು ಗಣಕೀಕರಣ ಸೇವೆಗೆ ಅಳವಡಿಸಿದೆ.

17.4 ಪ್ರಸ್ತುತ ಸಾಲಿನಲ್ಲಿ ಮಂಡಳಿಯು 440 ಕೊಳಚೆ ಪ್ರದೇಶಗಳಲ್ಲಿ ರೂ:330 ಲಕ್ಷ ವೆಚ್ಚದಲ್ಲಿ 62,875 ನಿವಾಸಿಗಳ ಸುಧಾರಣೆ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ.

17.5 ಡಿಸೆಂಬರ್ 1984ರ ಅಂತ್ಯದವರೆಗೆ ಶೇಕಡ 59ರಷ್ಟು ಪ್ರಗತಿಯನ್ನು ಪರಿಸರ ಸುಧಾರಣೆ ಕಾರ್ಯಕ್ರಮದಲ್ಲಿ ಹಾಗೂ ಶೇಕಡ 75ರಷ್ಟು ಪ್ರಗತಿ ಸಾಧನೆಯನ್ನು 'ವಸತಿ ಗೃಹ' ಕಾರ್ಯಕ್ರಮದಲ್ಲಿ ಸಾಧಿಸಿದ್ದು ಮಂಡಳಿಯು ಪ್ರಾರಂಭದಿಂದ ಇದುವರೆಗೆ ಸುಮಾರು 982 ಕೊಳಚೆ ಪ್ರದೇಶಗಳಲ್ಲಿ 10.84 ಲಕ್ಷ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದೆ. ಮೂಲಭೂತ ಸೌಕರ್ಯ ಒದಗಿಸಲಾಗಿರುವ ಕೊಳಚೆ ಪ್ರದೇಶಗಳಲ್ಲಿ ಇ.ಡಬ್ಲ್ಯು.ಎಸ್. ಗೃಹಗಳನ್ನು ನಿರ್ಮಿಸಿದೆ. ಅಲ್ಲದೆ ವಸತಿ ಗೃಹ ಯೋಜನೆಯಲ್ಲಿ ಸುಮಾರು 6500 ಹೊಸ ಮನೆಗಳ ಗುರಿಯನ್ನು 6ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಹಾಕಿಕೊಂಡಿದ್ದು ಪ್ರಸ್ತುತ

ಸಾಲಿನಲ್ಲಿ 1600 ಮನೆಗಳನ್ನು ಪೂರ್ಣಗೊಳಿಸುವ ಉದ್ದೇಶವಿದೆ. ಡಿಸೆಂಬರ್ 1994ರ ವರೆಗೆ 993 ಮನೆಗಳನ್ನು ನಿರ್ಮಿಸಿದೆ. ಇದಲ್ಲದೆ ಪ್ರಾರಂಭದಿಂದ ಇದುವರೆವಿಗೂ ಮಂಡಳಿಯು 2374.11 ಲಕ್ಷ ರೂಗಳ ವೆಚ್ಚದಲ್ಲಿ 12,432 ಮನೆಗಳನ್ನು ನಿರ್ಮಿಸಿದೆ.

17.6 <u>ನಿವೇಶನ ಮತ್ತು ಸೇವೆ</u>:— ಭೂ ಸ್ವಾಧೀನವಾದಂತೆ 250 ನಿವೇಶನಗಳ ರಚನೆಗೆ ಮಂಡಳಿಯು ಪ್ರಥಮ ಹಂತದಲ್ಲಿ ರೂ:70.00 ಲಕ್ಷಗಳನ್ನು ಒದಗಿಸಿದೆ.

17.7 ಕೊಳಚೆ ಪ್ರದೇಶಗಳಲ್ಲಿ ಮನೆ ಸಮೀಕ್ಷೆ ಕಾರ್ಯವನ್ನು ಪ್ರಾರಂಭಿಸಿರುತ್ತಾರೆ. ಅಂತೆಯೇ ಕೊಳಚೆ ನಿವಾಸಿಗಳಿಗೆ ಗುರುತಿನ ಚೀಟಿಯನ್ನು ವಿತರಿಸಲಾಗುತ್ತಿದೆ.

17.8 ಪ್ರಸ್ತುತ ಸಾಲಿನಲ್ಲಿ ಮಂಡಳಿಯು ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದವರಿಗೆ 632 ಮನೆಗಳನ್ನು ಹಂಚಿದೆ.

17.9 ಪ್ರಸ್ತುತ ಸಾಲಿನಲ್ಲಿ ಸರ್ಕಾರದ ನೀತಿಯನ್ನು ಅನುಸರಿಸಿ ಮಂಡಳಿಯು ಕೊಳಚೆ ಅಭಿವೃದ್ಧಿ ತೆರಿಗೆಯ ವಸೂಲಾತಿಯ ಕ್ರಮವನ್ನು ಜಾರಿಗೆ ತಂದಿದೆ. 1994-95 ಸಾಲಿಗೆ ಗುರಿ ರೂ:10.00 ಕೋಟಿಯೆಂದು ನಿಗದಿಪಡಿಸಿದ್ದು ಡಿಸೆಂಬರ್ 94ರ ಅಂತ್ಯದವರೆಗೆ ರೂ: 4.28 ಲಕ್ಷ ಸಂಗ್ರಹಣೆ ಸಾಧಿಸಿದೆ.

17.10 <u>ಬೇಡಿಕೆ ವಸೂಲಾತಿ ವಿವರ</u>:—

| | ಬೇಡಿಕೆ | ವಸೂಲಿ | ಬಾಕಿ |
|---|---|---|---|
| ಡಿಸೆಂಬರ್ | 139.41 | 2.34 | 138.07 |

ಸಬ್ಸಿಡಿ ಕಾರ್ಯಕ್ರಮದಡಿಯಲ್ಲಿ ಮಂಡಳಿಯು ರೂ:113.80 ಲಕ್ಷವನ್ನು ವಸೂಲು ಮಾಡಿದೆ.

18 <u>ಬೆಂಗಳೂರು ಸಮೂಹ ಕ್ಷಿಪ್ರ ಸಾರಿಗೆ ನಿಯಮಿತ</u>

18.1 ಕಂಪನಿ ಕಾನೂನಿನಡಿ ಸ್ಥಾಪಿತವಾದ ಬೆಂಗಳೂರು ಸಮೂಹ ಕ್ಷಿಪ್ರ ಸಾರಿಗೆ ನಿಯಮಿತವು (ಬಿ.ಎಂ.ಆರ್.ಟಿ.ಎಲ್) 21-8-1994ರಂದು ಅಸ್ತಿತ್ವಕ್ಕೆ ಬಂತು. ನಾಲ್ಕು ಶ್ರೇಣಿಯ ಐ.ಎ.ಎಸ್. ಅಧಿಕಾರಿಯೊಬ್ಬರನ್ನು ವ್ಯವಸ್ಥಾಪಕ ನಿರ್ದೇಶಕರನ್ನಾಗಿ ನೇಮಿಸಿ, ಹೊಸ ಕಂಪನಿ,

18.7 ಈ ಯೋಜನೆಯ ಅನುಷ್ಠಾನಕ್ಕಾಗಿ ತಾಂತ್ರಿಕ ಮತ್ತು ಆರ್ಥಿಕವಾಗಿ ಸಾಮರ್ಥ್ಯ ಪರಿಣತಿ ಇರುವ ದೇಶೀಯ ಹಾಗೂ ವಿದೇಶೀಯ ಕಂಪನಿಗಳೊಡನೆ ನಿರ್ದಿಷ್ಟ ಒಪ್ಪಂದ ಹೊಂದಿ, ನಿರ್ದಿಷ್ಟ ವರ್ಗಾಯಿಸುವ ನೀತಿಗನುಗುಣವಾಗಿ ಬಿ.ಎಂ.ಆರ್.ಟಿ.ಎಲ್. ಮತ್ತು ಕರ್ನಾಟಕ ಸರ್ಕಾರದ ಜಂಟಿ ಒಡೆತನದಲ್ಲಿ ಈ ಉದ್ಯಮವನ್ನು ನಿರ್ವಹಿಸುವಂತೆ ಯೋಜಿಸಲಾಗಿತ್ತು. ಹೀಗೆ ಸ್ಥಾಪಿಸಲಾದ ಜಂಟಿ ಉದ್ಯಮವನ್ನು ಕರ್ನಾಟಕ ಸರ್ಕಾರವು ನಿಗದಿ ಪಡಿಸುವ ಅವಧಿಗೆ ನಿರ್ದಿಷ್ಟ ಬೆಲೆಗೆ ಕರ್ನಾಟಕ ಸರ್ಕಾರಕ್ಕೆ ವರ್ಗಾಯಿಸ ಬೇಕಾಗಿದೆ. ಪ್ರಸಕ್ತ ಈ ಸಂಸ್ಥೆಯು ಹಣಕಾಸಿನ ವ್ಯವಸ್ಥೆಯನ್ನು ಒಳಗೊಂಡಂತೆ ಐ.ಎಲ್.ಎಫ್.ಎಸ್.ನವರು ನೀಡಿದ ಕಾರ್ಯಸಾಧ್ಯ ವರದಿಯನ್ನು ಪರಿಶೀಲಿಸುತ್ತಿದೆ. ಒಂದು ಜಾಹೀರಾತಿ ಪ್ರಕಟಣೆ ನೀಡುವುದಲ್ಲದೆ ಈ ಘನ್ನದ ಯೋಜನೆಯಲ್ಲಿ ಪಾಲ್ಗೊಳ್ಳಲು ಇಚ್ಛಿಸುತ್ತಿರುವ ಕಂಪನಿಗಳಿಗೆ ನೆರವಾಗಲು ಮಾಡಲಿಕ್ಕಾಗಿ ಒಂದು ಸವಿವರವಾದ ಪ್ರಸ್ತಾವನಾ ಕೋರಿಕೆಯನ್ನು (ಆರ್.ಎಫ್.ಪಿ.) ಕೂಡಾ ತಯಾರಿಸಲಾಗುತ್ತಿದೆ.

18.8 <u>ಭವಿಷ್ಯದಲ್ಲಿ ಮಾಡಬೇಕಾದ ಕ್ರಮಗಳು:-</u>

ಹೀಗೆ ತಯಾರಿಸಲಾದ ಆರ್.ಎಫ್.ಪಿ.ಯನ್ನು ಸರ್ಕಾರದ ಅನುಮೋದನೆ ಪಡೆದ ಬಳಿಕ ಪ್ರಮುಖ ದೇಶೀಯ ಮತ್ತು ವಿದೇಶೀಯ ಪತ್ರಿಕೆಗಳಲ್ಲಿ ಪ್ರಕಟಪಡಿಸಲಾಗುವುದು. ಇದಕ್ಕುತ್ತರವಾಗಿ ಬಂದ ಪ್ರಸ್ತಾವನೆಗಳಲ್ಲಿ ನಿಗದಿಪಡಿಸಲಾದ ಅರ್ಹತೆ ಹೊಂದಿರುವ ಒಂದು ಕಂಪನಿಯನ್ನು ಈ ಯೋಜನೆಯನ್ನು ಕರ್ನಾಟಕ ಸರ್ಕಾರದೊಡನೆ ಜಂಟಿಯಾಗಿ ಅನುಷ್ಠಾನಗೊಳಿಸಲು ಆರಿಸಬೇಕಾಗಿದೆ.

18.9 ಇದಲ್ಲದೆ ಈ ಯೋಜನೆಗಾಗಿ ಬೇಕಾಗುವ ಮಾರ್ಗಗಳಲ್ಲಿ ಮಣ್ಣಿನ ಪರೀಕ್ಷೆ, ಸಂಚಾರ ವ್ಯವಸ್ಥೆ ಸರ್ವೇಕ್ಷಣ ಮುಂತಾದ ಹಲವಾರು ಕ್ರಮಗಳನ್ನು ಅಧ್ಯಯಿಸಬೇಕಾಗಿದೆ. ಇದಲ್ಲದೆ ಮುಂದೆ ಕೈಗೊಳ್ಳಬೇಕಾಗಿರುವ ಸಿ ' ಮುಂದ ಪ್ಪ ' ಮಾರ್ಗಗಳ ಸರ್ವೇಕ್ಷಣೆ ಮತ್ತು ನಿಲ್ದಾಣಗಳ ಸ್ಥಾಪನೆಗೆ ಬೇಕಾಗುವ ಸ್ಥಳಗಳ ಬಗ್ಗೆ ಕಾರ್ಯಗಳನ್ನು ಮಾಡಿ ಸಂಬಂಧಿಸಿದವರೊಂದಿಗೆ ಚರ್ಚೆಗಳನ್ನು ನಡೆಸಬೇಕಾಗಿದೆ. ಈ ಯೋಜನೆಗೆ ಸಾಮರ್ಥ್ಯ ಪ್ರಕಾರ ನೀಡುವವರೊಂದಿಗೆ ಪಾಲ್ಗೊಳ್ಳುವವರ ತಿಳುವಳಿಕೆಗಾಗಿ ಬಿಡ್ಡಿಂಗ್ ಕ್ರಮಗಳನ್ನು ಸೇರಿಸುವುದು, ಜಾಹೀರಾತು ಪತ್ರಗಳನ್ನು ತಯಾರಿಸುವುದು ಇತ್ಯಾದಿ ಕ್ರಮಗಳನ್ನು ಕೂಡಾ ಯೋಜಿಸಲಾಗಿದೆ.

18.10 <u>ಬಿ.ಎಂ.ಆರ್.ಟಿ.ಎಲ್. 1994-95ರ ಆಯವ್ಯಯವು:-</u>

1994-95ನೇ ಆಯವ್ಯಯದಲ್ಲಿ ಬಿ.ಎಂ.ಆರ್.ಟಿ.ಎಲ್.150ಲಕ್ಷ ರೂಗಳ ಅನುದಾನವನ್ನು ನಿಗದಿಪಡಿಸಲಾಗಿದೆ. ಬಿಡ್ ರೀತ್ಯ ಶೀರ್ಷಿಕೆಯಲ್ಲಿ 1-4-93 ರಿಂದ 31-12-94ರವರೆಗೆ ರೂ:35,12,340-24ನ್ನು ಈ ಕೆಳಗಿನಂತೆ ಖರ್ಚು ಮಾಡಲಾಗಿದೆ.

| ಸಂಖ್ಯೆ | ಅವಧಿ | ವಿವರ | ಮೊಬಲಗು |
|---|---|---|---|
| 1 | 1-4-93 ರಿಂದ 31-3-94 | ಸಿಬ್ಬಂದಿ ಮತ್ತು ಇತರ | ರೂ:8,10,385.00 |
| 2 | 1-4-94 ರಿಂದ 31-12-94 | -ಡಿಟ್ಟೋ- | ರೂ:27,01,955.24 |
| | | | ರೂ:35,12,340.24 |

ದಿನಾಂಕ 31-12-1994 ರಲ್ಲಿದ್ದಂತೆ ಈ ಸಂಸ್ಥೆಯಲ್ಲಿ 19 ಖಾಯಂ ಮತ್ತು ಒಬ್ಬ ಒಪ್ಪಂದದ ಮೇರೆಗೆ ನೇಮಿಸಲಾದ ನೌಕರರಿದ್ದಾರೆ.

18.11 <u>1995-96ಕ್ಕೆ ಈ ಸಂಸ್ಥೆಯ ಆಯವ್ಯಯ:-</u>

ಈ ಸಂಸ್ಥೆಯು ಮುಂದಿರುವ ಬಹುಮುಖ ಚಟುವಟಿಕೆಗಳಿಗಾಗಿ ಮತ್ತು ಈಕ್ವಿಟಿ ಮತ್ತು ಅಧೀನ ಸಾಲದ ಬಾಬ್ತು ನೀಡಿಕೆಗಾಗಿ 1995-96 ರಿಂದ 2006-07ನೇ ಇಸವಿಯವರೆಗೆ ಈ ಸಂಸ್ಥೆಗೆ ವರ್ಷಂ ಪ್ರತಿ ರೂ:100 ಕೋಟಿಗಳು ಬೇಕಾಗುತ್ತದೆ.

ಈ ಅನುದಾನದಿಂದ ಕೆಳಗೆ ಕಾಣಿಸಿದ ವೆಚ್ಚಗಳನ್ನು ಭರಿಸಲು ನಿರ್ಧರಿಸಲಾಗಿದೆ:-

1) ಸಿಬ್ಬಂದಿ ವೇತನ, ಆಡಳಿತ ಖರ್ಚು, ವಾಹನ, ಸಾರಿಗೆ ಇತ್ಯಾದಿ.

2) ಯೋಜನೆಯ ವೆಚ್ಚ.

3) ಮಾರ್ಗ 'ಎ' ಮತ್ತು 'ಬಿ'ಯಲ್ಲಿ ಮತ್ತು ಸಾಧ್ಯವಾದಲ್ಲಿ ಮಾರ್ಗ 'ಸಿ'ಯಿಂದ 'ಎಫ್' ವರೆಗಿನ ಮಾರ್ಗಗಳಲ್ಲಿ ಮಣ್ಣಿನ ಪರೀಕ್ಷೆ.

4) ಮಾರ್ಗ 'ಎ' ಮತ್ತು 'ಬಿ'ಯಲ್ಲಿ 2 ಕಿ.ಮೀ. ಪ್ರತಿ ಭಾಗ (ಪಟ್ಟಿಯಲ್ಲಿ) ಸಂಚಾರ ವ್ಯವಸ್ಥೆ ಮತ್ತು ಮನೆಗಳ ಸರ್ವೇಕ್ಷಣೆ.

5) ಮಾರ್ಗ 'ಸಿ' ಯಿಂದ 'ಎಫ್' ನ ಸರ್ವೇಕ್ಷಣೆ ಮತ್ತು ನಿಲ್ದಾಣಗಳಿಗಾಗಿ ಸ್ಥಳಗಳ ಆಯ್ಕೆ.

6) ಮಾರ್ಗ 'ಎ' ಮತ್ತು 'ಬಿ' ಯಲ್ಲಿ ಜಾಗದ [illegible] ಯೋಜನೆಯ ಅನುಷ್ಠಾನದಿಂದ ತೊಂದರೆಗೊಳಗಾಗುವ ಅಥವಾ ಬಾಧಿತರಾದ [illegible] ಸರ್ವೇಕ್ಷಣೆ.

7) ಬೇಕಾಗಬಹುದಾದಂತಹ ([illegible]) ವ್ಯವಸ್ಥೆಯ ಅಧ್ಯಯನ.

---

Printed by The Director of Printing, Stationery & Publications,
Government Press, Bangalore

